# ಕಲಾವಿದ ಎನ್.ಸಿ. ದೇಸಾಯಿ

(ಎಂ.ವಿ.ಎ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)


ವಿದ್ಯಾರ್ಥಿನಿ

ಮುತ್ತಮ್ಮ ನಾರಾಯಣ ಯಸಮನೋಲ್ಲು

ಮಾರ್ಗದರ್ಶಕರು

ಡಾ. ಶಿವಾನಂದ ಬಂಟನೂರ

ಅಧ್ಯಾಪಕರು





ದೃಶ್ಯಕಲಾ ವಿಭಾಗ

ಲಲಿತಕಲಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೫

# ಕಲಾವಿದ ಎಸ್.ಸಿ. ದೇಸಾಯಿ

[ಎಂ.ವಿ.ಎ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಪ್ರಬಂಧ]

ಯ ಆಂಶಿಕ ಅವಶ್ಯಕತೆಗಾಗಿ

ವಿದ್ಯಾರ್ಥಿನಿ

**ಮುತ್ತಮ್ಮ ನಾರಾಯಣ ಯನಮನೋಲ್ಲು**

ಮಾರ್ಗದರ್ಶಕರು

**ಡಾ. ಶಿವಾನಂದ ಬಂಟನೂರ**

ಅಧ್ಯಾಪಕರು



ದೃಶ್ಯಕಲಾ ವಿಭಾಗ

ಲಲಿತಕಲಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬

# ಘೋಷಣಾ ಪತ್ರ

ಕಲಾವಿದ ಎನ್.ಸಿ. ದೇಸಾಯಿ ಎಂಬ ಸಂಪ್ರಬಂಧವನ್ನು ಡಾ. ಶಿವಾನಂದ ಬಂಟನೂರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ವಿ.ಎ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು ಇದನ್ನು ಈ ಮೊದಲು ಇಡಿಯಾಗಿ ಇಲ್ಲವೆ ಬಿಡಿಯಾಗಿ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 16-5-2005

ಮುತ್ತಮ್ಮ ನಾರಾಯಣ ಯೆನಮನೋಲ್ಲು
ಎಂ.ವಿ.ಎ. ೪ನೇ ಸೆಮಿಸ್ಟರ್ ವಿದ್ಯಾರ್ಥಿನಿ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪ್ರಮಾಣ ಪತ್ರ

ಮುತ್ತಮ್ಮ ನಾರಾಯಣ ಯನಮನೋಲ್ಲು ಇವರು ಕಲಾವಿದ ಎಸ್.ಸಿ. ದೇಸಾಯಿ ಎಂಬ ಸಂಪ್ರಬಂಧವನ್ನು ಬರೆದು ಎಂ.ವಿ.ಎ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ್ದಾರೆ. ಮುತ್ತಮ್ಮ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುವ ಈ ಸಂಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು, ಇದು ಇಡಿಯಾಗಿ ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲ ಮತ್ತು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸಿರುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೬/೫/೦೫.

ಡಾ. ಶಿವಾನಂದ ಬಂಟನೂರ
ಮಾರ್ಗದರ್ಶಕರು ಮತ್ತು ಅಧ್ಯಾಪಕರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಅಂತರಂಗದ ಆಳದಿಂದ ತನ್ನಷ್ಟಕ್ಕೆ ತಾನೇ ಗಂಗಾಜಲದ ಹಾಗೆ ಹೊರಹೊಮ್ಮಿ ಬರುವ ಭಾವನೆಗಳ ರೂಪಕವೇ ಕಲೆ. 'ಕಲೆ' ಎಂಬ ಶಬ್ದ ನಮ್ಮ ಸಂಸ್ಕೃತಿಯ ಇತಿಹಾಸದಲ್ಲಿ ಬಹಳ ಹಿಂದಿನಿಂದಲೇ ಬಳಕೆಯಾಗಿರುವುದು ತಿಳಿದುಬರುತ್ತದೆ. ಸಂಸ್ಕೃತದ ಕಲಾ ಎನ್ನುವುದು ಕನ್ನಡದಲ್ಲಿ ಕಲೆ ಆಗಿದೆ. ಚಂದ್ರಕಲಾ ಅಥವಾ ಚಂದ್ರಕಲೆ ಎಂದು ಬಳಸುವಲ್ಲಿ 'ಕಲಾ' ಪದಕ್ಕೆ ಚಂದ್ರನ ಹದಿನಾರನೆಯ ಒಂದಂಶವೆಂಬ ಅರ್ಥವಿದೆ. 'ಕಲಾ' ಶಬ್ದಕ್ಕೆ ಗತಿ, ನಡೆ, ಅರ್ಥ, ಜ್ಞಾನ, ತಿಳುವಳಿಕೆ ಎಂಬ ಅರ್ಥಗಳಿವೆ. ಮನುಕುಲದ ವಿಕಾಸವನ್ನೆಲ್ಲಾ ಇಡಿಯಾದ ಅರ್ಥದಲ್ಲಿ 'ಕಲೆ' ಎಂಬ ಶಬ್ದಕ್ಕೆ ಅನ್ವಯಿಸುವಂತೆ ಕೆಲವು ವ್ಯಾಖ್ಯಾನಗಳು ಬಂದಿವೆ. ಋಗ್ವೇದದಲ್ಲಿ ಕಲೆಗೆ ಅಂಶವೆಂಬ ಅರ್ಥವಿದ್ದುದಲ್ಲದೆ ಅದು ದಿವ್ಯಶಕ್ತಿಯ, ಕಾಂತಿಯ ಒಂದು ಕಿರಣ 'ಕಲೆ' ಎಂದರೆ ಅಂಶ ಅಥವಾ ಕರ್ತೃತ್ವ 'ಕ' ಕಾರವು ಬ್ರಹ್ಮವಾಚಕವಾದುದರಿಂದ ಸೃಷ್ಟಿಯನ್ನು, 'ಲ' ಕಾರವು ಲಯವನ್ನು ಸೂಚಿಸುವುದರಿಂದ ಕಲೆಯು ಸೃಷ್ಟಿ, ಸ್ಥಿತಿ, ಸಂಹಾರ ರೂಪವಾದುದು ಎಂಬ ಅಭಿಪ್ರಾಯವೂ ಇದೆ. ಈ ಅಭಿಪ್ರಾಯಗಳು ಮಾನವ ಬದುಕಿನ ಹೊಸ ಶೋಧಗಳನ್ನೊಳಗೊಂಡು ವಿಕಸಿತ ಜೀವನವನ್ನೇ ವ್ಯಾಖ್ಯಾನಿಸಿದಂತೆ ಕಂಡುಬರುತ್ತವೆ.

"ಮಾನವನ ಕಲ್ಯಾಣಕ್ಕೆ ಹಿತವಾದುದು ಕಲೆ" ಎಂದು ಟಾಲ್‌ಸ್ಟಾಯ್, "ಮಾನವನ ಚಿತ್ತರಂಗ ದಿಗ್ದರ್ಶನವೇ ಕಲೆ"ಯೆಂದು ಹೆಗ್ಗಲ್, "ನಿಸರ್ಗದ ರಸಘಟ್ಟಿಯೇ ಕಲೆಯೆಂದು "ಬಾಲ್‌ಜಾಕ್", ಜೀವನ ದರ್ಶನ ಮಾಡಿಸುವುದು ಕಲೆಯೆಂದು "ಹ್ಯಾವಲಾಕ್ ಇಲ್ಲೀಸ್", ಆತ್ಮದರ್ಶನ ಮಾಡಿಸುವುದೇ ಕಲೆಯೆಂದು ಅರವಿಂದ ಯೋಗಿಗಳು" ಅಭಿಪ್ರಾಯಪಡುತ್ತಾರೆ. ಟಾಲ್‌ಸ್ಟಾಯ್ ಅವರು ಅನುಭವಿಸಿ ಆಗಿರುವ ಭಾವವನ್ನು ಒಬ್ಬಾತ ತನ್ನಲ್ಲಿ ಎಚ್ಚರಿಸಿಕೊಂಡು, ಅದನ್ನು ಚಲನೆ, ರೇಖೆ, ಬಣ್ಣ, ನಾದ, ಆಕೃತಿ, ಶಬ್ದಗಳ ಮೂಲಕ ಅಭಿವ್ಯಕ್ತಗೊಳಿಸಿ, ಆ ಭಾವವನ್ನು ಇನ್ನೊಬ್ಬನೆಡೆಗೆ ಪ್ರವಹಿಸಿದಾಗ ಎರಡನೆಯವನಲ್ಲೂ ಮೂಲದ ಭಾವನೆ ಸ್ಫುರಿಸುವಂತೆ ಮಾಡುವುದೇ ಕಲೆಯ ಕೆಲಸ ಎಂದಿದ್ದಾರೆ. ಹೀಗೆ 'ಕಲೆ'ಯನ್ನು ಕುರಿತು ಬೇರೆ ಬೇರೆ ವ್ಯಾಖ್ಯಾನ ಬಂದರೂ ಅದು ಸಮಗ್ರವಾಗಿ ಹಿಡಿದಿಡಲಾಗದಂತಹ ಪದ ಮಹತ್ವವುಳ್ಳದ್ದು. ಇಂತಹ ಶಬ್ದಶಕ್ತಿಯನ್ನು ಮೀರಿ ಕರ್ತೃತ್ವದ ಕುಲುಮೆಯಲ್ಲಿ ಯಾವುದೋ ಒಂದು ಕಾಲಕ್ಕೆ ಮನುಷ್ಯ ಪ್ರತಿಭೆಯ ಆವಿಷ್ಕಾರವಾಗಿ, ಹೊಸ ಶೋಧವಾಗಿ ಬದುಕನ್ನು ಸುಂದರಗೊಳಿಸಲು ಹುಟ್ಟಿಬಂದ ಚಟುವಟಿಕೆಯೇ ಕಲೆ ಎನ್ನಬಹುದಾಗಿದೆ.[1]

ಹಿಂದೂ ಗ್ರಂಥಗಳಲ್ಲಿಯೂ ೬೪ ಕಲೆಗಳ ಕುರಿತು ಮಾಹಿತಿ ದೊರೆಯುತ್ತದೆ. ವಾತ್ಸಾಯನನ ಕಾಮ ಸೂತ್ರದಲ್ಲಿ ಪ್ರತಿಪಾದಿತವಾದ ಅರವತ್ನಾಲ್ಕು ಕಲೆಗಳನ್ನು ಉಲ್ಲೇಖಿಸಿದ್ದಾರೆ.[೨]

ನಮ್ಮ ದೇಶದಲ್ಲಿ ಈ ಕಲಾಸಾಹಿತ್ಯವು ಇತ್ತೀಚೆಗಷ್ಟೆ ಪ್ರಚಲಿತದಲ್ಲಿ ಬರುತ್ತಿರುವುದನ್ನು ಕಾಣುತ್ತೇವೆ. ಡಾ. ಶಿವರಾಮ ಕಾರಂತ ಅವರು ಅಭಿಪ್ರಾಯಪಡುವಂತೆ "ನಮ್ಮ ದೇಶದ ಮಟ್ಟಿಗೆ ಹೇಳುವಲ್ಲಿ ಬಹುಮಂದಿ ವಿದ್ಯಾವಂತರಿಗೆ ಜಗತ್ತಿನ ವಿವಿದ ಕಲೆಗಳ ಪರಿಚಯ ಇರುವುದಂತಿರಲಿ ಸ್ವದೇಶದ ಚಿತ್ರ, ಶಿಲ್ಪಾದಿ ಕಲೆಗಳ ಪರಿಚಯವೂ ಸಾಕಷ್ಟಿಲ್ಲ. ಅವನ್ನು ಕುರಿತು ದೇಶ ಭಾಷೆಗಳಲ್ಲಿ ತಿಳಿಸಿ ಹೇಳುವ ಸಾಹಿತ್ಯಕ್ಕೂ ಕೊರತೆ ಇದೆ. ನಮ್ಮ ದೇಶಭಾಷೆಗಳಲ್ಲಿ ಕಾಣಿಸುವ ಈ ಶೂನ್ಯತೆ ಬೃಹತ್ ಗಾತ್ರದ್ದು ಎಂಬ ಮಾತಿನಲ್ಲಿ ಸತ್ಯಾಂಶವಿದೆ."[೩]

ಕರ್ನಾಟಕದಲ್ಲಿ ಚಿತ್ರಕಲೆ ತನ್ನದೇ ಆದ ವಿಶಿಷ್ಟ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದೆ. ಇದರ ಇತಿಹಾಸದಲ್ಲಿ ಅನೇಕ ಕಲಾವಿದರು ಹುಟ್ಟಿ ತಮ್ಮ ಪ್ರತಿಭೆಯನ್ನು ತೋರಿ ಮರೆಯಾಗಿದ್ದಾರೆ. ಈ ರೀತಿಯ ಎಷ್ಟೋ ಕಲಾವಿದರ ಕಲಾಕೃತಿಗಳು ಮತ್ತು ಅವರು ಬದುಕಿ ಬಾಳಿದ ವಿವರಗಳ ಇತಿಹಾಸ ದಾಖಲೆಯಲ್ಲಿ ಮಾಸಿ ಹೋದ ಪುಟಗಳಂತಿವೆ. ಅಕಾಡೆಮಿಯಿಂದ ಪ್ರಕಟವಾದ ಕಲಾವಿದರ ಪರಿಚಯ ಸಾಹಿತ್ಯ ಸ್ವಲ್ಪಮಟ್ಟಿಗೆ ಬಂದಿದೆ. ಕಲೆಯನ್ನು ಕುರಿತು ಮತ್ತು ಕಲಾವಿದರನ್ನು ಕುರಿತು ಇನ್ನೂ ಹೆಚ್ಚಿನ ಕಲಾ ಸಾಹಿತ್ಯ ಹೊರ ಬರಬೇಕು. ಈ ನಿಟ್ಟಿನಲ್ಲಿ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆಗಳು ನಡೆಯುತ್ತಿರುವುದು ಇತ್ತೀಚೆಗೆ ಕಂಡುಬರುತ್ತಿದೆ.

ಕಲಾವಿದನ ಜೀವನದಲ್ಲಿ ಬರುವ ಎಲ್ಲ ಸುಃಖದುಃಖಗಳು, ಸುತ್ತಮುತ್ತಲು ಇರುವ ಪರಿಸರ, ತಾನು ಪಡೆದ ಶಿಕ್ಷಣ, ಧ್ಯೇಯ, ಧೋರಣೆ, ಸಾಧನೆ, ಸಿದ್ಧಿ ಮುಂತಾದವುಗಳು ಆತನ ಕಲಾಕೃತಿಗಳಿಗೆ ವಸ್ತುವಾಗುತ್ತವೆ. ಕಲಾವಿದ ಕಾಲಕ್ಕೆ ತಕ್ಕ ಹಾಗೆ ತನ್ನ ಅನುಭವಗಳನ್ನು ಕಲಾಕೃತಿಗಳಲ್ಲಿ ತುಂಬುತ್ತಾ ಹೋಗುತ್ತಾನೆ. ಆ ಕಲಾಕೃತಿಗಳು ಕಲಾವಿದನ ಬದುಕಿನ ಕನ್ನಡಿಯಾಗಿರುತ್ತವೆ. ಕನ್ನಡಿಯಲ್ಲಿ ಇಣುಕಿ ನೋಡಿದರೆ ಕಲಾವಿದನ ಅಭಿರುಚಿ, ಕಲಾ ವಸ್ತು ಆಯ್ಕೆ ಆ ವಸ್ತುವಿನ ಬಗ್ಗೆ ತೋರುವ ಆಸ್ಥೆ ಇಲ್ಲವೆ ಪ್ರತಿಕ್ರಿಯೆಯಲ್ಲಿ ಕಂಡುಬರುತ್ತದೆ. ಯಾವುದೇ ಕಲಾವಿದನ ಧೋರಣೆಯೂ ಅವನದೇ ಆದ ಅಭಿವ್ಯಕ್ತಿಯ ವೈಯಕ್ತಿಕತೆಯಲ್ಲಿ ಅವನ ಕಲಾಸೃಷ್ಟಿಯ ವಿಶಿಷ್ಟತೆಯನ್ನು ಗುರುತಿಸಬಹುದು. ಈ ಹಿನ್ನೆಲೆಯಲ್ಲಿ ಕಲಾವಿದರ ಜೀವನ ಚರಿತ್ರೆಯ ಅಧ್ಯಯನವು ಇಲ್ಲಿ ಅಷ್ಟೇ ಮಹತ್ವದ್ದಾಗಿದೆ.

ಕರ್ನಾಟಕದಲ್ಲಿ ಚಿತ್ರಕಲಾ ಕ್ಷೇತ್ರವನ್ನು ಕುರಿತು ಸಂಶೋಧನೆಗಳು ನಡೆಯುತ್ತಿರುವುದರಿಂದ ಮಾಸಿಹೋದ ಪುಟಗಳಿಗೆ ಪುನರ್ಜೀವ ಕೊಡುವ ಕಾರ್ಯ ಗಂಭೀರವಾಗಿ ನಡೆಯುತ್ತಿವೆ. ನಮ್ಮ ನಾಡಿನ ಹಿರಿಯ ಕಲಾವಿದರ ಕಲಾಕೃತಿಗಳು ಮುಂದಿನ ಕಲಾವಿದ್ಯಾರ್ಥಿಗಳ ಅಧ್ಯಯನಕ್ಕೆ ಉಪಯೋಗವಾಗುತ್ತವೆ. ಜೊತೆಗೆ ಇಂಥ ಕಲಾವಿದರ ಕಲಾಕೃತಿಗಳ ದಾಖಲೆಯು ಸಹ ಅಷ್ಟೇ ಮಹತ್ವದ್ದಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಕೈಗೊಂಡಿರುವ ವಿಷಯ ಧೀಮಂತ ಕಲಾವಿದ ಎಸ್.ಸಿ. ದೇಸಾಯಿ ಅವರನ್ನು ಕುರಿತದ್ದು.

೭೯ ವರ್ಷಗಳ ತಮ್ಮ ಜೀವನವನ್ನು ಕಲಾ ಆರಾಧನೆಗೆ ಮುಡುಪಾಗಿಟ್ಟು, ಧೀಮಂತ ಕಲಾವಿದ ಎಂದು ಖ್ಯಾತಿಯನ್ನು ಪಡೆದ ಎನ್.ಸಿ. ದೇಸಾಯಿಯವರು ತಮ್ಮ ಜೀವನದ ಕಾಲಾವಧಿಯಲ್ಲಿ ಅಡ್ಡಿ ಆತಂಕಗಳನ್ನು ಮೆಟ್ಟಿ ನಿಂತು ಕಲಾ ಸಾಧನೆ ಮಾಡಿರುವವರು. ಇವರ ಕಲಾಕೃತಿಗಳು ಮತ್ತು ಕಲಾ ಸಂಶೋಧನ ಸಾಹಿತ್ಯ (ಲೇಖನಗಳು) ಜನಮನವನ್ನು ಸೂರೆಗೊಂಡಿವೆ. ಈ ದ್ವಿಮುಖ ಪ್ರತಿಭಾವಂತ ಅಗಡಿಯ ಹಾವನೂರು ಸಂಸ್ಥಾನದ ಮನೆತನದವರು ಇವರ ಬದುಕಿನ ಹಿಂದೆ ಒಂದು ಮಹತ್ವದ ಇತಿಹಾಸವೇ ಇದೆ.

(ಈ ವಿಷಯ ಕುರಿತು ಸಂಶೋಧನೆ ಮಾಡುತ್ತಿರುವ ನಾನು ಧೀಮಂತ ಕಲಾವಿದ ಎನ್.ಸಿ. ದೇಸಾಯಿಯವರ ಶಿಷ್ಯೆಯಾಗಿ ಇವರ ಸಹಾಯಕ ಕಲಾವಿದೆಯಾಗಿ, ಇವರ ಜೊತೆ ಮತ್ತು ಮನೆತನದ ಜೊತೆ ಸುಮಾರು ೧೦ ವರ್ಷಗಳ ಒಡನಾಟದೊಂದಿಗೆ ಇವರನ್ನು ಅತಿ ಹತ್ತಿರದಿಂದ ನೋಡಿರುವವಳಾಗಿದ್ದು, ಇವರನ್ನು ಕುರಿತು ಬಹಳಷ್ಟು ಮಾಹಿತಿ ಇದ್ದು ಅದನ್ನು ಅಧ್ಯಯನಕ್ಕೆ ಒಳಪಡಿಸಿದ್ದೇನೆ.)

ಬಹುಮುಖ ಪ್ರತಿಭೆಯ ಕಲಾವಿದ ಎನ್.ಸಿ. ದೇಸಾಯಿಯವರು ಕಲಾಕ್ಷೇತ್ರಕ್ಕೆ ರೇಖಾಚಿತ್ರಗಳು, ತೈಲವರ್ಣ ಚಿತ್ರಗಳು, ಜಲವರ್ಣ ಚಿತ್ರಗಳು ಮತ್ತು ಛಾಯಾಚಿತ್ರಗಳನ್ನು ಹಾಗೂ ಸಂಶೋಧನ ಲೇಖನಗಳು ಹೀಗೆ ವೈವಿಧ್ಯಯವಾದ, ವಿಶೇಷವಾದ ಕೊಡುಗೆಯನ್ನು ಕೊಟ್ಟಿರುವರು. ಅವರ ಕಲಾಕೃತಿಗಳನ್ನು ಪರಿಚಯಿಸಿಕೊಡುವ ಪ್ರಮುಖ ಉದ್ದೇಶವನ್ನು ಪ್ರಸ್ತುತ ಅಧ್ಯಯನವು ಹೊಂದಿದೆ.

ಸಂಸ್ಕೃತಿಯ ಬಹುಮುಖ್ಯವಾದ ಅಭಿವ್ಯಕ್ತಿಯಲ್ಲಿ ಚಿತ್ರಕಲೆಯೂ ಒಂದು. ಯಾವುದೇ ಕಲಾಕೃತಿಯೊಂದರ ಅಧ್ಯಯನಕ್ಕೆ ಅದರ ಕರ್ತೃವಿನ ಜೀವನಾಭ್ಯಾಸವು ಅಗತ್ಯವಾಗಿರುತ್ತದೆ. ಕಲಾವಿದ ಬಾಳಿದ ಕಾಲ, ಪರಿಸರ, ಅಲ್ಲದೆ ಅವನ ಸಮಕಾಲೀನ ಅಂಶಗಳು ಹೇಗೆ ಕಲಾಕೃತಿಯಲ್ಲಿ ಒಡಮೂಡಿವೆ ಎಂಬ ಅಂಶಗಳನ್ನು ಅಭ್ಯಸಿಸಿದರೆ ಮಾತ್ರ ಕಲಾಕೃತಿಯನ್ನು ತಿಳಿದುಕೊಳ್ಳಲು ಸಾಧ್ಯ. ಅಂತೆಯೇ ಎನ್.ಸಿ.ದೇಸಾಯಿಯವರ ಜೀವನದೊಂದಿಗೆ ಅವರ ಕಲಾಸಾಧನೆ, ಅವರ ಸಮಕಾಲೀಸ ಕಲಾವಿದರು, ಶಿಕ್ಷಣ, ಪಠ್ಯಕ್ರಮ, ಕಲಾಕೃತಿಗಳ ವಸ್ತು, ಶೈಲಿ, ತಂತ್ರ ಇತ್ಯಾದಿ ಹತ್ತುಹಲವಾರು ವಿವರಗಳನ್ನು ಪ್ರಸ್ತುತ ಅಧ್ಯಯನದ ಮೂಲಕ ಕಂಡುಕೊಳ್ಳುವ ಉದ್ದೇಶವನ್ನು ಇಲ್ಲಿ ಇಟ್ಟುಕೊಳ್ಳಲಾಗಿದೆ.

## ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು

ಚಿತ್ರಕಲಾ ಕ್ಷೇತ್ರದಲ್ಲಿ ೧೯೮೦ರ ದಶಕದವರಗೆ ಕರ್ನಾಟಕದಲ್ಲಿ ವಿಶ್ವವಿದ್ಯಾಲಯ ಅಥವಾ ಸಂಘ-ಸಂಸ್ಥೆಗಳ ಮಟ್ಟದಲ್ಲಿ ಸಂಶೋಧನ ಅಧ್ಯಯನಗಳು ಕಂಡುಬಂದಿಲ್ಲ. ಆದರೆ ೧೯೮೦ರ ನಂತರ ಸಂಶೋಧನೆಯು ವಿಶ್ವವಿದ್ಯಾಲಯದ ಮಟ್ಟದಲ್ಲಿ ಅಧ್ಯಯನದ ರೂಪದಲ್ಲಿ ಕೆಲವು ಕಡೆ ಕಾಣಬಹುದು ಮುಂದೆ ೧೯೯೦ರ ದಶಕದಿಂದ ಧಾರವಾಡ, ಬೆಂಗಳೂರು ವಿಶ್ವವಿದ್ಯಾಯಗಳಲ್ಲಿ ಅಲ್ಪಸ್ವಲ್ಪ ಕಾಣಬಹುದು. ೧೯೯೭-೯೮ ಹಂಪಿ ವಿಶ್ವವಿದ್ಯಾಲಯದಲ್ಲಿ ತೀವ್ರವಾಗಿ ಸಂಶೋಧನಾ ಕಾರ್ಯ ನಡೆದಿರುವುದನ್ನು ಕಾಣಬಹುದು.

ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಪ್ರಥಮವಾಗಿ ನಾವು ೨೦೦೧ರಿಂದ ಸಂಶೋಧನೆ ತೊಡಗಿರುವುದನ್ನು ಕಾಣಬಹುದು. ಒಟ್ಟಿನಲ್ಲಿ ಕರ್ನಾಟಕದಲ್ಲಿ ೧೯೮೦ರ ದಶಕದಿಂದ ಪ್ರಾರಂಭಗೊಂಡ ಸಂಶೋಧನೆ ಈಗ ಗಮನಾರ್ಹವಾದ ರೀತಿಯಲ್ಲಿ ಬೆಳೆಯುತ್ತಿದೆ. ಇಲ್ಲಿಯವರೆಗೆ ಕರ್ನಾಟಕ ಚಿತ್ರಕಲಾ ಕ್ಷೇತ್ರದಲ್ಲಿ ನಡೆದ ಅಧ್ಯಯನವನ್ನು ಈ ರೀತಿಯಾಗಿ ಸಮೀಕ್ಷಿಸಬಹುದಾಗಿದೆ.

೧೯೮೦ರ ದಶಕದಿಂದ ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಮೊದಲಬಾರಿಗೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆ ಕುರಿತು ಸಂಶೋಧನಾತ್ಮಕ ಅಧ್ಯಾಯನಗಳ ಪ್ರಾಂಭಗೊಂಡಿರುವುದು ಕಂಡು ಬರುತ್ತದೆ. ಡಾ.ಎಸ್.ಸಿ.ಪಾಟೀಲರು ೧೯೮೨ರಲ್ಲಿ ಕರ್ನಾಟಕ ವಿಶ್ವವಿದ್ಯಾಯಲಯದ ಸ್ನಾತಕೊತ್ತರ ಶಿಕ್ಷಣ ವಿಭಾಗಕ್ಕೆ ಮಂಡಿಸಿದ 'ಮಾಧ್ಯಮಿಕ ಶಾಲಾ ಶಿಕ್ಷಣ: ಒಂದು ಅಧ್ಯಯನ' ಎಂಬ ಕಿರು ಸಂಶೋಧನಾ ಪ್ರಬಂಧ ಈ ಕ್ಷೇತ್ರದಲ್ಲಿ ಬಂದ ಪ್ರಥಮ ಅಧ್ಯಯನ ಕಾರ್ಯವೆಂದು ದಾಖಲಾಗಿದೆ. ೧೯೮೨ರಲ್ಲಿ ಡಾ.ಬಿ.ಕೆ.ಹಿರೇಮಠರವರು 'ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ' ಎಂಬ ಪಿ.ಎಚ್.ಡಿ. ಮಹಾ ಪ್ರಬಂಧದಲ್ಲಿ ಹಸ್ತಪ್ರತಿ ಚಿತ್ರಕಲೆ ಕುರಿತಂತೆ ಕೆಲವು ಅಧ್ಯಾಯಗಳು ಮೀಸಲಾಗಿವೆ. ಇದರ ನಂತರ ೧೯೯೧ರಲ್ಲಿ ಕರ್ನಾಟಕದಲ್ಲಿ ಜನಪದ ಚಿತ್ರಕಲೆಯನ್ನು ಸಂಶೋಧನೆಯ ಮುಖ್ಯ ವಿಷಯವನ್ನಾಗಿಟ್ಟುಕೊಂಡು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಡಾ.ಎಸ್.ಸಿ. ಪಾಟೀಲರ 'ಕರ್ನಾಟಕದ ಜನಪದ ಚಿತ್ರಕಲೆ' ಪಿಎಚ್.ಡಿ ಮಹಾಪ್ರಬಂಧ ಒಂದು ಮೈಲುಗಲ್ಲಾಗಿದೆ. ನಂತರ ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು ೧೯೯೭ರಲ್ಲಿ ಡಾ. ಸಂಪದ ಭಟ್ ಅವರ ಹಿಂದೂಸ್ತಾನಿ ಸಂಗೀತ ಹಾಗೂ ರಾಗಮೂಲ ಚಿತ್ರಗಳು ಬೆಂಗಳೂರು ವಿಶ್ವವಿದ್ಯಾಲಕ್ಕೆ ೧೯೯೭ರಲ್ಲಿ ಮಂಡಿಸಿದರು. ಡಾ.ಪುಷ್ಪಾದ್ರಾವಿಡ ಇವರು ಅನಿವಾಸಿ ಭಾರತೀಯ ಕಲಾವಿದ 'ಬಿ. ನಿಕೋಲಸ್ ರೋರಿಕ್ ಜೀವನ ಮತ್ತು ಕಲಾಕೃತಿಗಳು' ೨೦೦೧ರಲ್ಲಿ ಡಾ. ಯಾದಪ್ಪ ಪರದೇಶಿಯವರ 'ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ: ಒಂದು ಅಧ್ಯಯನ' ೨೦೦೨ರಲ್ಲಿ, ಡಾ.ಶಿವಾನಂದ ಬಂಟನೂರು ಇವರ 'ಕರ್ನಾಟಕ ಜನಪದ ಶಿಲ್ಪಕಲೆ: ಒಂದು ಅಧ್ಯಯನ', ಡಾ. ಗಿರೀಶ ಅವರ 'ಬುಡಕಟ್ಟು ಚಿತ್ರಕಲೆ', ಡಾ. ಲಕ್ಷ್ಮೀದೇವಿ ಗವಾಯಿಯವರ ಕಲಾವಿದ ಎಂ.ವಿ ಚಟ್ಟಿಯವರ 'ಜೀವನ ಕಲಾಕೃತಿಗಳು ಒಂದು ಅಧ್ಯಯನ', ಶರಣಪ್ಪ ಕೋಲ್ಕಾರ ಅವರ 'ಕೊಪ್ಪಳ ಹಂಪಿ ಪ್ರದೇಶದ ಪ್ರಾಗೈತಿಹಾಸ ಕಾಲದ ಕಲೆ', ಡಾ. ಸೌಮ್ಯ ಅವರ 'ಯಂತ್ರಾದಿ ವಿಜುವಲ್ ಆಂಫ್ ಶಂಕರಾಪ ಫಿಲಾಸಫಿ ರೇಫರೆನ್ಸ ಟು ಕಾಂಟೆಂಪರರಿ ತಾಂತ್ರಿ ಆರ್ಟಿಸ್ಟ್', ಡಾ.ಪ್ರಮೀಳಾ ಲೋಚನ್ ಅವರ 'ಮೈಂಡ್ ಮ್ಯೂಜಿಕ್ ಅಂಡ್ ಕಲರ್ ಎಕ್ಸ್‌ಪೋಜಿಸ್ ಅಂಡ್ ಡೆವೆಲಪ್‌ಮೆಂಟ್ ಆಫ್ ರಾಗಮಾಲಾ ಯಂಡ್ ಕಾಂಟೆಂಪರರಿ ಪೇಂಟಿಂಗ್', ಡಾ.ಹೀಮಾ ಶೇಖರ ಮಂಡಿಸಿದ 'ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ' (೧೭೮೦-೧೮೫೦), ಡಾ.ಸಿದ್ದಲಿಂಗಸ್ವಾಮಿ ಹಿರೇಮಠ ಅವರ 'ಕಲಾವಿದ ಆರ್.ಎಮ್. ಹಡಪದ ಒಂದು ಅಧ್ಯಯನ', ಡಾ.ಎಸ್.ಸಿ. ಪಾಟೀಲರು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಮಂಡಿಸಿದ 'ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ್ ಎಜ್ಯುಕೇಶನ್ ಆರ್ಟ ಸ್ಕೂಲ್ ಲೆವೆಲ್ ಇನ್ ಕರ್ನಾಟಕ ಸ್ಟೇಟ್, ವಿತ್

ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ್ ಅಂಡ್ ಪೇಂಟಿಂಗ್', ಡಾ.ವಿ.ಎಮ್.ಬಾಗಯಿತ ಅವರ 'ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ ಒಂದು ಅಧ್ಯಯನ' (೧೪೦೦-೧೮೦೦) ಡಾ ಶಿವಕುಮಾರ ಜಿ.ಓ. ಅವರು ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು ಕುರಿತು ಹೀಗೆ ಪಿಎಚ್.ಡಿ. ಅಧ್ಯಯನ ಪ್ರಬಂಧಗಳು ಬಂದಿವೆ ಮತ್ತು ಮಲ್ಲಿಕಾರ್ಜುನ ಬಾಗೋಡಿಯವರ ಎಂ.ಫಿಲ್. ಪದವಿಗಾಗಿ ಮಂಡಿಸಿದ ಕಲಾವಿದ ಜೆ.ಎಸ್. ಖಂಡೇರಾವ್ ಜೀವನ ಮತ್ತು ಕಲಾಕೃತಿಗಳು ಮತ್ತು ಎ.ಎಸ್. ವಿಶ್ವನಾಥ ಅವರ ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ ಇವುಗಳು ದೃಶ್ಯಕಲೆಯ ಕುರಿತಾಗಿ ಬಂದ ಸಂಶೋಧನ ಅಧ್ಯಯನಗಳಾಗಿವೆ. ಇವಲ್ಲದೆ ಅನೇಕ ಕಲಾಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ಸ್ನಾತಕೋತ್ತರ ಅಧ್ಯಯನದ ಭಾಗವಾಗಿ ಸಂಶೋಧನ ಸಂಪ್ರಬಂಧಗಳು ಸಾಕಷ್ಟು ಪ್ರಮಾಣದಲ್ಲಿ ಬಂದಿರುವುದು ಕಂಡುಬರುತ್ತದೆ.

ಗುಲಬರ್ಗಾ ವಿಶ್ವವಿದ್ಯಾಲಯ, ಬೆಂಗಳೂರು ವಿಶ್ವವಿದ್ಯಾಲಯ, ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯಗಳಲ್ಲಿ ಕೂಡ ಈ ಕ್ಷೇತ್ರದಲ್ಲಿ ಸಂಶೋಧನ ಅಧ್ಯಯನಕ್ಕೆ ಅವಕಾಶ ಮಾಡಿಕೊಡಲಾಗಿದೆ. ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ೨೦೦೪ರಿಂದ ಚಿತ್ರಕಲೆಯಲ್ಲಿ ಎಂ.ವಿ.ಎ., ಪದವಿ ಪ್ರಾರಂಭಗೊಂಡಿರುವುದು ಈ ಕ್ಷೇತ್ರದಲ್ಲಿ ಸಂಶೋಧನೆ ಹೆಚ್ಚು ವ್ಯಾಪಕವಾಗಿ ಬೆಳೆಯಲು ಕಾರಣವಾಗಿದೆ.

ಪ್ರಸ್ತುತ ಸಂದರ್ಭದ ಗಮನಾರ್ಹ ಕಲಾವಿದರಲ್ಲೊಬ್ಬರಾದ ಧೀಮಂತ ಕಲಾವಿದ ಎಸ್.ಸಿ. ದೇಸಾಯಿಯವರ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಇವರ ಕುರಿತು ಕೆಲವು ದಿನಪತ್ರಿಕೆ ಮತ್ತು ಗ್ರಂಥಗಳಲ್ಲಿ ಇವರ ಪರಿಚಯದ ಲೇಖನಗಳು ಬಂದಿವೆ. ಇಷ್ಟನ್ನು ಬಿಟ್ಟರೆ, ಸಮಗ್ರವಾದ ಇವರ ವ್ಯಕ್ತಿತ್ವ ಕಲಾಕೃತಿಗಳ ಅಧ್ಯಯನದ ಯಾವ ಗ್ರಂಥಗಳು ಇಲ್ಲಿಯವರೆಗೆ ಬಾರದೆ ಇರುವುದನ್ನು ಗಮನಿಸಿ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

ಕರ್ನಾಟಕದ ಹಿರಿಯ, ಧೀಮಂತ ಕಲಾವಿದ ಎಸ್.ಸಿ. ದೇಸಾಯಿಯವರ ಜೀವನ, ಕಲಾಕೃತಿಗಳ ಅಧ್ಯಯನ ಇದೇ ಮೊದಲ ಬಾರಿಗೆ ಕೈಗೊಳ್ಳಲಾಗಿದೆ. ಎಸ್.ಸಿ. ದೇಸಾಯಿಯವರನ್ನು ಕುರಿತು ಈವರಗೆ ವಿಮರ್ಶಾತ್ಮಕ, ಪರಿಚಯಾತ್ಮಕ ಲೇಖನಗಳು ಮಾತ್ರ ಅಲ್ಲಲ್ಲಿ ಪ್ರಕಟವಾಗಿವೆ. ಅದರಲ್ಲಿ ಎಸ್.ಸಿ. ದೇಸಾಯಿಯವರ ಜೀವನ ಹಾಗೂ ಕಲಾಕೃತಿಗಳನ್ನು ಕುರಿತು ಕೆಲವು ವಿವರಗಳ ಮಾಹಿತಿ ಸಿಗುತ್ತದೆ. ಈ ಎಲ್ಲಾ ಪೂರಕ ಮಾಹಿತಿಯನ್ನು ಬಳಸಿಕೊಂಡು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಇದಕ್ಕಿಂತಲೂ ಮುಖ್ಯವಾಗಿ ಒಬ್ಬ ಶ್ರೇಷ್ಠ ಕಲಾವಿದನಿಗೆ ಸಲ್ಲಬೇಕಾದ ಗೌರವವನ್ನು ಸ್ವಲ್ಪ ಪ್ರಮಾಣದಲ್ಲಿ ಈ ಮೂಲಕ ದೊರಕಿಸಿಕೊಟ್ಟಂತಾಗುತ್ತದೆ.

## ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವನ್ನು ಆರು ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡಿದ್ದು, ಪ್ರತಿಯೊಂದು ಅಧ್ಯಯನಗಳಲ್ಲಿ ಚರ್ಚಿಸುವ ವಿಷಯವನ್ನು ಕುರಿತಂತೆ ಅದರ ಸಂಕ್ಷಿಪ್ತ ಸ್ವರೂಪದ ವಿವರವನ್ನು ಇಲ್ಲಿ ಕೊಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಾಯದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ಆಕರ ಸಾಮಗ್ರಿಗಳನ್ನು ಕುರಿತು ವಿವರಣೆ ನೀಡಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಎಸ್.ಸಿ.ದೇಸಾಯಿಯವರ ಮನೆತನದ ಇತಿಹಾಸ, ಬಾಲ್ಯ, ಪರಿಸರ, ಸಾಮಾನ್ಯ ಶಿಕ್ಷಣ, ಕಲಾಶಿಕ್ಷಣ ಮತ್ತು ವೃತ್ತಿ ಜೀವನ ಹಾಗೂ ಕೌಟುಂಬಿಕ ಪರಿಸರವನ್ನು ಈ ಅಧ್ಯಾಯದಲ್ಲಿ ಹೇಳಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಎಸ್.ಸಿ. ದೇಸಾಯಿಯವರ ಕಲಾಕೃತಿಗಳನ್ನು ಎರಡು ವಿಂಗಡಿಸಿ ಮತ್ತೆ ಅವುಗಳನ್ನು ಉಪವಿಂಗಡಣೆ ಮಾಡಿಕೊಂಡು ಚರ್ಚಿಸಲಾಗಿದೆ.

ಅ. ರೇಖಾಚಿತ್ರಗಳು

ಬ. ವರ್ಣಚಿತ್ರಗಳು

೧. ಕಾವ್ಯ ಕುರಿತು ವರ್ಣ ಚಿತ್ರಗಳು. ೨. ಸಂಪ್ರದಾಯಕ ಶೈಲಿಯ ವರ್ಣ ಚಿತ್ರಗಳು. ೩. ವ್ಯಕ್ತಿಚಿತ್ರ ಮತ್ತು ಐತಿಹಾಸಿಕ, ಧಾರ್ಮಿಕ ಮಹಾಪುರುಷರ ನಿರೂಪಣ ಚಿತ್ರಗಳು. ೪.ಗಣೇಶನ ಕುರಿತು ವೈವಿಧ್ಯಮಯ ವರ್ಣ ಚಿತ್ರಗಳು. ೫. ದೇವತಾ ಚಿತ್ರಗಳು. ೬. ನಿಸರ್ಗದ ದೃಶ್ಯ ಚಿತ್ರಗಳು. ೭. ಮುಖಪುಟ ವಿನ್ಯಾಸ ಮತ್ತು ಕ್ಯಾಲೆಂಡರ್ ವಿನ್ಯಾಸ ಚಿತ್ರಗಳು. ೮. ಸಂಯೋಜನ ಚಿತ್ರಗಳು. ಅಲ್ಲದೆ,

ಕ. ಎಸ್.ಸಿ.ದೇಸಾಯಿಯವರ ಛಾಯಚಿತ್ರಕಲೆ.

ಡ. ಶೇಷಾಚಲೇಶ್ವರ ಮಂದಿರದ ಗೋಪುರ. ಹೀಗೆ ಈ ಮೇಲೆ ತೋರಿಸಿರುವಂತೆ ವಿಶ್ಲೇಷಿಸಿ ಒಳಪಡಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಎಸ್.ಸಿ.ದೇಸಾಯಿಯವರಿಗೆ ಸಂದ ಪ್ರಶಸ್ತಿ, ಗೌರವ, ಸನ್ಮಾನ, ಪ್ರಶಂಸೆಗಳನ್ನು ಮತ್ತು ಪ್ರಾತ್ಯಕ್ಷಿಕೆಗಳು ಹಾಗೂ ಕಲಾ ಪ್ರದರ್ಶನ ಕುರಿತು ಕೆಲವು ಛಾಯಾಚಿತ್ರಗಳ ಜೊತಗೆ ಅವರನ್ನು ಕುರಿತು ಪ್ರಕಟಿತ ಸಾಹಿತ್ಯ ವಿವರಣೆ ನೀಡಲಾಗಿದೆ.

ಆರನೆಯ ಅಧ್ಯಾಯದಲ್ಲಿ ಐದೂ ಅಧ್ಯಾಯಗಳ ಸಂಕ್ಷಿಪ್ತ ಸಮಾಲೋಚನೆ ಹಾಗೂ ಪ್ರಸ್ತುತ ಅಧ್ಯಯನದಿಂದ ಹೊರಬಂದ ಪ್ರಮುಖ ವಿಷಯಗಳ ಸಮೀಕ್ಷೆ ಮಾಡಲಾಗಿದೆ.

ಅನುಬಂಧದಲ್ಲಿ ಪ್ರಮಾಣ ಪತ್ರಗಳು ಮತ್ತು ಗ್ರಂಥಋಣದಲ್ಲಿ ಪುಸ್ತಕಗಳ ವಿವರ ನೀಡಲಾಗಿದೆ. ಹೀಗೆ ಇದು ಅಧ್ಯಯನದ ಒಟ್ಟು ಸ್ವರೂಪವಾಗಿದೆ.

**ವ್ಯಾಪ್ತಿ**

ವ್ಯಕ್ತಿಗತ ಅಧ್ಯಾಯದಲ್ಲಿ (Case Study) ಧೀಮಂತ ಕಲಾವಿದ ಎಸ್.ಸಿ.ದೇಸಾಯಿಯವರ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಅದರಲ್ಲಿ ಅವರ ಸಾವಿರಾರು ಕಲಾಕೃತಿಗಳನ್ನು ವಿಂಗಡಿಸಲಾಗಿದೆ.

ವಿಶ್ವವ್ಯಾಪಿ ಗಣೇಶ, ಕಾವ್ಯಕುರಿತು ವರ್ಣಚಿತ್ರಗಳು, ಸಾಂಪ್ರದಾಯಕ ಶೈಲಿಯ ವರ್ಣ ಚಿತ್ರಗಳು ಮತ್ತು ಇತರ ವರ್ಣಚಿತ್ರಗಳನ್ನು ಇದೆ ರೀತಿಯಾಗಿ ಬೇರೆ ಬೇರೆಯಾಗಿ ವಿಭಜಿಸಿ ಅಧ್ಯಾಯನದ ವ್ಯಾಪ್ತಿಗೆ ಒಳ ಪಡಿಸಲಾಗಿದೆ. ಎಸ್.ಸಿ.ದೇಸಾಯಿಯವರು ಬರೆದ ನೂರಾರು ಲೇಖನಗಳನ್ನು ಪಟ್ಟಿಮಾಡಲಾಗಿದೆ. ಜೊತೆಗೆ ಅವರನ್ನು ಕುರಿತು ಪ್ರಕಟಿತ ಲೇಖನಗಳನ್ನು ಕೂಡ ಪಟ್ಟಿಮಾಡಲಾಗಿದೆ. ಕ್ಷೇತ್ರಕಾರ್ಯದಲ್ಲಿ ಪಿಎಚ್.ಡಿ.ಗೆ ಬೇಕಾದಷ್ಟು ವಿಷಯ ಮತ್ತು ಕಲಾಕೃತಿಗಳ ಸಂಗ್ರಹವಾಗಿದ್ದು. ಈಗಿನ ಅಧ್ಯಯನದ ಮಿತಿಯಲ್ಲಿ ಕಲಾಕೃತಿಗಳನ್ನು ವಿಷಯದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಇಲ್ಲಿ ಎರಡು ರೀತಿಯ ಆಕರಗಳನ್ನು ಬಳಸಿಕೊಳ್ಳಲಾಗಿದೆ.

೧. ಮೂಲ ಆಕರ ಸಾಮಗ್ರಿ

೨. ಅನುಷಂಗಿಕ ಆಕರ ಸಾಮಗ್ರಿ

ಹೀಗೆ ಎರಡೂ ಮೂಲಗಳಿಂದ ವಿಷಯ ಸಂಗ್ರಹ ಮಾಡಲಾಗಿದೆ.

## ಮೂಲ ಆಕರ ಸಾಮಗ್ರಿ

ಮೂಲ ಆಕರ ಸಾಮಗ್ರಿಗಳಲ್ಲಿ ಮುಖ್ಯವಾದದ್ದು. ಕ್ಷೇತ್ರಕಾರ್ಯ ಇದರಲ್ಲಿ ಸಂದರ್ಶನ. ಧ್ವನಿಮುದ್ರಣ, ಛಾಯಾಚಿತ್ರಣ ಮಾಡುವುದು ಅವರ ಬಗ್ಗೆ ಪ್ರಕಟವಾದ ಲೇಖನಗಳು ಹಾಗೂ ಅವರು ಬರೆದ ಸಂಶೋಧನ, ವಿಮರ್ಶೆ ಸುದ್ದಿ, ಪರಿಚಯ, ಲೇಖನಗಳನ್ನು ಜೊತೆಗೆ ಡೈರಿಗಳಿಂದ ವಿಷಯ ಸಂಗ್ರಹಿಸಿ ವಿವರ ಪಡೆಯುವುದಾಗಿದೆ. ಅವರ ಸಮಕಾಲೀನರ ಸಂದರ್ಶನಗಳು ಹಾಗೂ ಸಂಗ್ರಹಿತ ವಿಷಯಗಳ ಪಟ್ಟಿ ಸಿದ್ಧಪಡಿಸಿ ವಿವಿಧ ರೂಪದಲ್ಲಿ ಅಧ್ಯಯನ ಮಾಡಲಾಗಿದೆ.

### ಸಂದರ್ಶನ

ಎಸ್.ಸಿ.ದೇಸಾಯಿಯವರ ಮನೆಗೆ ಹೋಗಿ ಅವರ ಕುಟುಂಬದ ಜನರಿಂದ ಅವರ ಬಾಲ್ಯ, ಸಾಮಾನ್ಯ ಶಿಕ್ಷಣ, ಕಲಾ ಶಿಕ್ಷಣ, ಮುಂಬೈಯ ಜೀವನ, ವೃತ್ತಿ ಜೀವನ ಕಲಾ ಗುರುಗಳು, ಗೆಳೆಯರ ಬಳಗ, ಚಿತ್ರಕಲಾ ಪ್ರದರ್ಶನಗಳು, ಅವರ ಚಿತ್ರಶೈಲಿ, ತಂತ್ರ, ವಿನ್ಯಾಸ, ಹಾಗೂ ವರ್ಣಗಳ ಬಳಕೆ ಅಲ್ಲದೆ ಅಧ್ಯಯನ ಜೀವನದ ಬಗ್ಗೆ ಅವರ ಸ್ನೇಹಿತರನ್ನು ಮತ್ತು ಅವರ ನಿಕಟವರ್ತಿಗಳ ಊರೊಳಗೆ ಹೋಗಬೇಕಾಗಿ ಬಂದಾಗ, ಮೈಸೂರು, ಬೆಂಗಳೂರು, ಧಾರವಾಡ ಮತ್ತು ಹುಬ್ಬಳ್ಳಿಗೆ ಹೋಗಿ ಅವರ ಸಂದರ್ಶನದಿಂದ ವಿವರಗಳನ್ನು ಧ್ವನಿಮುದ್ರಣ ಮಾಡುವ ಮೂಲಕ ವಿಷಯ ಸಂಗ್ರಹಿಸಲಾಗಿದೆ.

### ಛಾಯಾಚಿತ್ರಣ

ಎಸ್.ಸಿ.ದೇಸಾಯಿಯವರು ಉತ್ತಮ ಛಾಯಾಗ್ರಹಕರಾಗಿ ಅವರ ಬದುಕಿನುದ್ದಕ್ಕೂ ಸಾವಿರಾರು ಕಲಾ ಕೃತಿಗಳನ್ನು ರಚಿಸಿದ್ದು ಆ ಕಲಾಕೃತಿಗಳ ಛಾಯಾಗ್ರಹಣ ಮಾಡಿ ನೆಗೆಟಿವ್‌ಗಳನ್ನು ಅವರ ಸ್ವಗ್ರಹದಲ್ಲಿ

ಇಟ್ಟಿದ್ದರು. ಅವುಗಳಿಂದ ಛಾಯಾಚಿತ್ರಗಳನ್ನು ಮುದ್ರಣ ಮಾಡಿಕೊಳ್ಳಲಾಗಿದೆ. ಹಾಗೆ ಇನ್ನೂ ಕೆಲವು ಕಲಾಕೃತಿಗಳನ್ನು ಛಾಯಾಗ್ರಹಣ ಮಾಡಿಸಿಕೊಳ್ಳಲಾಗಿದೆ. ಹೀಗೆ ಕ್ಷೇತ್ರಕಾರ್ಯದಲ್ಲಿ ಸಿಕ್ಕ ಚಿತ್ರಗಳು ಮತ್ತು ಛಾಯಾಚಿತ್ರಗಳು ಮುದ್ರಿತ ಕೃತಿಗಳನ್ನು ಸಹ ಛಾಯಾಗ್ರಹಣ ಮಾಡಿಕೊಂಡು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

## ಆನುಷಂಗಿಕ ಆಕರ ಸಾಮಗ್ರಿ

ಎಸ್.ಸಿ.ದೇಸಾಯಿಯವರ ಕುರಿತು ಪತ್ರಿಕೆಗಳಲ್ಲಿ ಪ್ರಕಟಿತ ಸಾಹಿತ್ಯ ಗಮನಿಸಿಲಾಗಿದೆ. ಮಹಾಪ್ರಬಂಧಗಳು ಪ್ರಕಟಿತ, ಅ ಪ್ರಕಟಿತ ಸಾಹಿತ್ಯ ಕೃತಿಗಳು, ನಿಘಂಟು ವಿಶ್ವಕೋಶ ಮತ್ತು ಇತ್ಯಾದಿಗಳಿಂದ ವಿಷಯ ಸಂಗ್ರಹಿಸಿಕೊಂಡು ಈ ಸಂಪ್ರಬಂಧವನ್ನು ಸಿದ್ಧಪಡಿಸಲಾಗಿದೆ ಮತ್ತು ಬಲ್ಲವರಿಂದ ಕೇಳಿ ತಿಳಿಯಲಾಗಿದೆ.

## ಟಿಪ್ಪಣಿಗಳು

೧. ಡಾ.ಎಸ್.ಸಿ. ಪಾಟೀಲ, ಕರ್ನಾಟಕ ಜನಪದ ಚಿತ್ರಕಲೆ, ಪು.೧೩

೨. ಡಾ. ಕಾಶೀನಾಥ ಅಂಬಲಗೆ, ಸೌಂದರ್ಯಶಾಸ್ತ್ರ, ಪು.೨೪೧

೩. ಡಾ. ಲಕ್ಷ್ಮೀದೇವಿ ಗವಾಯಿ, ಕಲಾವಿದ ಎಂ.ಎ. ಚೆಟ್ಟಿಯವರ ಜೀವನ, ಕಲಾಕೃತಿಗಳು ಒಂದು ಅಧ್ಯಯನ

ಅಧ್ಯಾಯ | ಎರಡು

# ಬಾಲ್ಯ, ಪರಿಸರ, ಶಿಕ್ಷಣ

**ಎನ್.ಸಿ. ದೇಸಾಯಿ ಅವರ ಮನೆತನ**

ದೇಸಾಯಿಯವರು ಉತ್ತರ ಕರ್ನಾಟಕದ ಹಾವೇರಿ ಜಿಲ್ಲೆಯ ಅಗಡಿ ಗ್ರಾಮದವರು. ದೇಸಾಯಿ ಇವರ ಮನೆತನದ ಅಡ್ಡ ಹೆಸರು. "ಬಹದ್ದೂರು ದೇಸಾಯಿ" ಎಂದು ಈ ಮನೆತನಕ್ಕೆ ಐತಿಹಾಸಿಕ ಹಿನ್ನೆಲೆಯೂ ಇದೆ. ಅಂದರೆ ಈ ದೇಸಾಯವರು ಹಾವನೂರಿನ ಸಂಸ್ಥಾನಿಕರಾಗಿದ್ದರು. ಕ್ರಿ.ಶ. ೧೭೮೦ ಮೈಸೂರಿನ ಹುಲಿ ಎಂದು ಪ್ರಸಿದ್ಧನಾಗಿದ್ದ ಟಿಪ್ಪುಸುಲ್ತಾನನು ದಂಡೆತ್ತಿ ಬಂದು ಒಂದು ರೀತಿಯಲ್ಲಿ ಮೋಸ ಮಸಲತ್ತು ಮಾಡಿ ಸಂಸ್ಥಾನಿಕನಾಗಿ ೧೪೪ ಹಳ್ಳಿಯ ಒಡೆಯನಾಗಿದ್ದ ಹನುಮಂತಗೌಡನೆಂಬುವನನ್ನು ಸೋಲಿಸಿ ಅವನನ್ನು ಶ್ರೀರಂಗಪಟ್ಟಣಕ್ಕೆ ತೆಗೆದುಕೊಂಡುಹೋಗಿ ಕೊಲ್ಲಿಸಿದನೆಂಬ ಪ್ರತೀತಿ ಇದೆ. ಇದಾದ ಮೇಲೆ ಸಂಸ್ಥಾನ ಹಾಳಾಯಿತು. ನಂತರ ಬ್ರಿಟಿಷರು ಟಿಪ್ಪುವಿನ ಮೈಸೂರು ರಾಜ್ಯವನ್ನು ಕೊನೆಗಾಣಿಸಿದರು. ಆ ಸಮಯ ಉತ್ತರ ಕರ್ನಾಟಕದ ಸೀಮೆಯೇ ಪುಣೆಯ ಪೇಶ್ವೆಯವರ ಆಡಳಿತದಲ್ಲಿತ್ತು.

ಹಾವನೂರು ಸಂಸ್ಥಾನದ ಕೊನೆಯ ರಾಜ ಹನುಮಂತ ಗೌಡನನ್ನು ಕೊಲ್ಲಿಸಿದ ನಂತರ ಆ ಮನೆತನದ ಮಹಿಳಾ ಸಮೂಹ ತುಂಗಭದ್ರೆಯ ದಂಡೆಯ ಮೇಲೆಯೇ ಇದ್ದ ಕೋಟೆಯಲ್ಲಿಯ ಅರಮನೆಯಿಂದಲೇ ತುಂಗೆಗೆ ಹಾರಿ ಆತ್ಮಾರ್ಪಣೆ ಮಾಡಿಕೊಂಡರು. ಆದರೆ ಹನುಮಂತ ಗೌಡನಿಗೆ ಒಬ್ಬ ಮಗನೂ ಇದ್ದ, ಲಿಂಗಗೌಡ ಎಂದು ಅವನ ಹೆಸರು ಸುದೈವದಿಂದ ಆ ಹುಡುಗನನ್ನು ಅರಮನೆಯ ಅಡಿಗಿಯವನಾಗಿದ್ದ ರಂಗಪ್ಪ ಎಂಬುವನು ಟಿಪ್ಪುವಿನ ಕಣ್ಣಿಗೆ ಬೀಳದಂತೆ ಬಚ್ಚಿಟ್ಟಿದ್ದನು. ಯಾವಾಗ ಟಿಪ್ಪುವಿನ ಸದ್ದು ಅಡಗಿತೊ ಆಗ ಅಡಿಗೆಯ ರಂಗಪ್ಪ ಬಾಲಕ ಲಿಂಗನಗೌಡನನ್ನು ಬೈಲಿಗೆ ತಂದರಷ್ಟೇ. ಅಲ್ಲಿ ಸಂಸ್ಥಾನದ ವಿಷಯವಾಗಿ ಅಭಿಮಾನ ತಾಳಿದ್ದವರನ್ನು ಕಲೆಹಾಕಿ ಮುಂದೆ ಏನು ಮಾಡುವುದು ಎಂದು ಅವರೊಟ್ಟಿಗೆ ವಿಚಾರ ವಿನಿಮಯಮಾಡಿ ಅಂದು ಸಂಸ್ಥಾನಕ್ಕೆ ಗುರುಸ್ಥಾನದಲ್ಲಿದ್ದ ಹಾಗೂ ಪೇಶ್ವೆಯವರ ಮೇಲೆ ವರ್ಚಸ್ಸುಳ್ಳ ಅವತಾರಿ ಪುರುಷ ಮುರಗೋಡಾ ಚಿದಂಬರ ಸ್ವಾಮಿಗಳಲ್ಲಿ ಹೋಗಿ ಅವರ ಸಲಹೆಯಂತೆ ನಡೆಯುವುದೆಂದು ನಿರ್ಧರಿಸಿದರು ಹಾಗೂ ರಂಗಪ್ಪನೇ ಲಿಂಗನಗೌಡನನ್ನು ಕರೆದುಕೊಂಡು ಮುರುಗೋಡಕ್ಕೆ ಹೋಗುವುದೆಂದೂ ನಿರ್ಣಯಿಸಿದರು.

ರಂಗಪ್ಪ ತಡಮಾಡದೆ ಎರಡು ಕುದುರೆಗಳನ್ನು ಸಜ್ಜು ಮಾಡಿಕೊಂಡು ಲಿಂಗನಗೌಡನೊಂದಿಗೆ ಮುರಗೋಡಕ್ಕೆ ತೆರಳಿದನು. ಅದೇ ಬ್ರಿಟೀಷರು ಭಾರತದಲ್ಲಿ ಬಲಾಢ್ಯರಾಗುವ ಕಾಲ. ಇದ್ದ ಬಿದ್ದ ಸಂಸ್ಥಾನಿಕರನ್ನು ಸದೆಬಡೆಯುವ ಗಡಿಬಿಡಿ. ಅವರಿಗೆ ಶರಣಾಗದಿದ್ದವರ ಮೇಲೆ ದಂಡೆತ್ತಿ ಹೋಗುವುದು ಇಲ್ಲವೇ ಕಾರಸ್ಥಾನ ಮೋಸದಿಂದ ಅವರಿಗೆ ತೊಂದರೆ ಕೊಡುವುದು ಮುಂತಾದ ಕಾರ್ಯಗಳನ್ನು ಆಂಗ್ಲರು ಹಮ್ಮಿಕೊಂಡಿದ್ದರು. ಹಾವನೂರು ಸಂಸ್ಥಾನದ ಗತಿಯನ್ನೇ ಅನುಭವಿಸಿ ಇನ್ನು ಎಷ್ಟೋ ಸಂಸ್ಥಾನಿಕರು ಕೂಡ ಸ್ವಾಮಿಯ ಮೊರೆ ಹೋದರು. ಅಂಥ ಪರಿಸ್ಥಿತಿಯಲ್ಲಿ ರಂಗಪ್ಪ ಸ್ವಾಮಿಗಳನ್ನು ಕಂಡನು ಮಹಾಸ್ವಾಮಿಗೆ ಹಾವನೂರ ಸಂಸ್ಥಾನ ಅಪರಿಚಿತವಾಗಿರಲಿಲ್ಲ. ಅವರ ಪರಮಭಕ್ತರಾಗಿದ್ದರಲ್ಲದೇ ಯಜ್ಞ ಮುಂತಾದ ಕಾರ್ಯಗಳಲ್ಲಿ ತೀರ ಹತ್ತಿರದಿಂದ ಸೇವೆ ಸಲ್ಲಿಸಿದವರಾಗಿದ್ದರು. ಆಗ ಮಹಾಸ್ವಾಮಿಯು ರಂಗಪ್ಪ ಲಿಂಗನಗೌಡರನ್ನು ಹತ್ತಿರಕ್ಕೆ ಕರೆದು ಔಪಚಾರಿಕವಾದ ನಾಲ್ಕು ಮಾತುಗಳನ್ನಾಡಿ ಮೋಡಿಲಿಪಿಯಲ್ಲಿ ಒಂದು ಚೀಟಿಯನ್ನು ಪೇಶ್ವೆಯವರಿಗೆ ಬರೆದು ಪುಣೆಗೆ ಹೋಗಲು ಹೇಳಿದರು. ಅವರೀರ್ವರೂ ಅವೇ ಕುದುರೆಗಳನ್ನೇರಿ ಪುಣೆಗೆ ಪ್ರಯಾಣ ಬೆಳೆಸಿದರು.

ಆಗ ಬಾಪು ಗೋಖಲೆನ ಆಡಳಿತ ಇವರೀರ್ವರೂ ಚಿದಂಬರಸ್ವಾಮಿಯ ಕಡೆಯಿಂದ ಬಂದವರೆಂದು ತಿಳಿದೊಡನೆ ಇವರನ್ನು ಕರೆದರು. ಸ್ವಾಮಿಯ ಚೀಟಿಯನ್ನು ಓದುತ್ತಲೆ "ನಿಜ ನಿಮ್ಮ ವಿಷಯ ನಮಗೆ ಗೊತ್ತು. ಆದರೂ ನಿಮ್ಮ ಸಂಸ್ಥಾನದ ವಿಷಯ ವಿವರವಾಗಿ ವಿಚಾರಿಸಿ ನಂತರ ನಿರ್ಣಯ ತೆಗೆದುಕೊಳ್ಳಲಾಗುವುದು ಅಂದೂ ಆ ಕೆಲಸ ಮುಗಿಯುವವರೆಗೆ ಸದ್ಯದ ಜೀವನಕ್ಕಾಗಿ ಒಂದು ಹಳ್ಳಿಯನ್ನು ನೀಡುತ್ತೇವೆ" ಎಂದು ಹೇಳಿ ಇಂಥದ್ದೇ ಹಳ್ಳಿಯೆಂಬುದನ್ನು ಹೆಸರಿಸಲಿಲ್ಲ. ಐದು ಹಳ್ಳಿಗಳ ಹೆಸರುಗಳನ್ನು ಸೂಚಿಸಿ ಅದರಲ್ಲಿಯ ಒಂದನ್ನು ತೆಗೆದುಕೊಳ್ಳುವಂತೆ ತಿಳಿಸಿದರು. ಈ ನಿರ್ಣಯವನ್ನು ಕೇಳುತ್ತಲೇ ರಂಗಪ್ಪನಿಗೆ ದಿಗಿಲಾಯಿತು. ಹೆಚ್ಚು ವಿಚಾರ ಮಾಡಲಿಲ್ಲ. ಸ್ವಾಮಿಯನ್ನು ಕೇಳಿಯೇ ಯಾವ ಹಳ್ಳಿಯನ್ನು ತೆಗೆದುಕೊಳ್ಳುವಂತೆ ತಿಳಿಸಿದರು. ಈ ನಿರ್ಣಯವನ್ನು ಕೇಳುತ್ತಲೇ ರಂಗಪ್ಪನಿಗೆ ದಿಗಿಲಾಯಿತು ಹೆಚ್ಚು ವಿಚಾರ ಮಾಡಲಿಲ್ಲ. ಸ್ವಾಮಿಯನ್ನು ಕೇಳಿಯೇ ಯಾವ ಹಳ್ಳಿಯನ್ನು ತೆಗೆದುಕೊಳ್ಳುವುದೆಂಬುದನ್ನು ನಿರ್ಧರಿಸುವುದು ಎಂದು ತೀರ್ಮಾನಿಸಿ ಮತ್ತೆ ಮುರಗೋಡಕ್ಕೆ ಬಂದರು. ಆಗ ಮಹಾಸ್ವಾಮಿಯು ಅಗಡಿಯನ್ನು ತೆಗೆದುಕೊಳ್ಳಲು ಹೇಳಿದರು. ಅದರಂತೆ ಮತ್ತೆ ಪುಣೆಗೆ ಹೋಗಿ ಅಗಡಿಯನ್ನು ಸ್ವೀಕಾರ ಮಾಡಿ ಮರಳಿದರು.[೨] ಈ ಮೊದಲಿನ ಇತಿಹಾಸ ಅಂದರೆ ಹಾವನೂರು ಸಂಸ್ಥಾನದ ನಿರ್ಮಾಣ ಆಳ್ವಿಕೆ ಸಂಸ್ಥಾನದ ಮೊದಲು ಈ ಮನೆತನದವರು ಎಲ್ಲಿಯವರು ಈ ಕಡೆಗೆ ಹೇಗೆ ಬಂದರು "ಹಾವನೂರು ಸಂಸ್ಥಾನದ ನಿರ್ಮಾಣದ ಮೊದಲಿನ ಕತೆ ಮುಂತಾದ ವಿವರ ಹೇಳುವ ಇತಿಹಾಸ ಪುಸ್ತಕ ರೂಪದಲ್ಲಿ ಬಂದಿದೆ. ಕಲಾವಿದ ಎನ್.ಸಿ. ದೇಸಾಯಿವರ ಕೂಡ ಬರೆದಿದ್ದಾರೆ. ಆದರೆ ಅಚ್ಚು ಹಾಕಿಸಿಲ್ಲ ಝುರಾಕ್ಸ್ ಮಾಡಿಸಲಾಗಿದೆ. ಹಾವನೂರ ಸಂಸ್ಥಾನ ಎರಡು ಶತಮಾನ ಬಾಳಿದೆ. ಅದರ ಎಲ್ಲ ವಿವರವೂ ಆ ಚಿಕ್ಕ ಪುಸ್ತಕದಲ್ಲಿದೆ ಮತ್ತು "ನೆನಪುಗಳು" ಎಂದು ಬರೆದ ಪುಸ್ತಕದಲ್ಲಿ ವಿವರಿಸಿದ್ದಾರೆ.

ಲಿಂಗನಗೌಡನು ಅಗಡಿಗೆ ಬಂದು ವಾಡೆಕೋಟೆ ಕಟ್ಟಿಸಿರಬೇಕು ಈ ವಿಷಯ ಕುರಿತು ವಿವರ ಎಲ್ಲಿಯೂ ಸಿಗುತ್ತಿಲ್ಲ. ದಂತಕತೆಯಾಗಿಯೂ ಗೋಚರವಾಗಿಲ್ಲ. ಲಿಂಗನಗೌಡನು ಅಗಡಿ ತೆಗೆದುಕೊಂಡ ನಂತರ ಕಲಾವಿದ ಎಸ್.ಸಿ. ದೇಸಾಯಿಯವರು ಐದನೆ ತಲೆಯವರು.

### ಅವಿಭಕ್ತ ಕುಟುಂಬ (Joint Family)

ಎಸ್.ಸಿ. ದೇಸಾಯಿಯವರ ಅಜ್ಜ ರಾಮನಗೌಡರು ಇವರಿಗೆ ಇಬ್ಬರು ಹೆಂಡತಿಯರು ಇವರ ಮೊದಲನೆಯ ಹೆಂಡತಿ. ಅನ್ನಪೂರ್ಣಮ್ಮನಿಗೆ ಇಬ್ಬರು ಮಕ್ಕಳು. ಚಿದಂಬರ ಗೌಡ ಊರ್ಫ ಬಾಬಾಸಾಹೇಬರು, ಭಯ್ಯಾ ಸಾಹೇಬ ಊರ್ಫ ಬಸವನಗೌಡ ಎಂದು ಮೊದಲನೆಯ ಹೆಂಡತಿ ತೀರಿಕೊಂಡ ಮೇಲೆ ಅವರ ಖಾಸತಂಗಿ - ಜಾನಕಿ ಬಾಯಿಯವರನ್ನೇ ಮದುವೆಯಾದರೂ ಅವರ ಹೊಟ್ಟೆಯಲ್ಲಿ ಲಿಂಗನ ಗೌಡರು ಕಲಾವಿದ ಒಬ್ಬನೇ ಗಂಡು ಮಗು ಹುಟ್ಟಿದನು. ಕಮಲಾಬಾಯಿ, ಸುಂದರಾಬಾಯಿ, ಸರಸವ್ವ, ಕುಶಲಾಬಾಯಿ ಮತ್ತು ಶಾಂತಬಾಯಿ ಎಂಬ ಐದು ಹೆಣ್ಣುಮಕ್ಕಳು ಜನ್ಮ ತಾಳಿದರು.

ಅವಿಭಕ್ತ ಕುಟುಂಬದಲ್ಲಿ ಚಿದಂಬರ ಗೌಡ ಊರ್ಫ್ ಬಾಬಾ ಸಾಹೇಬರು ಅವರ ಧರ್ಮಪತ್ನಿ ಸರಸ್ವತಿ ಬಾಯಿ. ಇಬ್ಬರು ಹೆಣ್ಣುಮಕ್ಕಳು. ಮೋನಾಬಾಯಿ ಮತ್ತು ರತ್ನಾಬಾಯಿ ಎಂದು. ಒಬ್ಬನೇ ಹಿರಿಯ ಮಗ ನಾನಾ ಸಾಹೇಬ ಬದ್ದೂರ ದೇಸಾಯಿ ಅವರೇ ಎಸ್.ಸಿ. ದೇಸಾಯಿ.

ಕ್ರಿ.ಶ. ೧೯೩೦ನೇ ಇಸ್ವಿ ಎಂದು ಪ್ಲೇಗಿನ ಹಾವಳಿ ಸುತ್ತಮುತ್ತ ಪಸರಿತ್ತು. ಆ ಪಿಡುಗು ಎಸ್.ಸಿ. ದೇಸಾಯಿಯವರ ಅಗಡಿಗೂ ಬಂತು ಆ ರೋಗ ಬಂದರೆ ಊರು ಬಿಟ್ಟು ಹೊರ ವಲಯದಲ್ಲಿ ಗುಡಿಸಲು ಹಾಕಿಕೊಂಡು ರೋಗ ಹಿಮ್ಮೆಟ್ಟುವವರೆಗೂ ಜನ ಅಲ್ಲಿಯೇ ಇರಬೇಕು. ಹಾಗೆ ಜನ ಊರು ಬಿಟ್ಟರು. ಆನಂದ ವನದ ಪಕ್ಕದಲ್ಲಿಯೇ ಒಂದು ಮನೆ ಇತ್ತು. ಅದನ್ನು ಎಸ್.ಸಿ. ದೇಸಾಯಿವರ ತಂದೆಯವರೇ ಕಟ್ಟಿಸಿದ್ದು, "ಬಂಗಲೆ" ಎಂದು ಅದಕ್ಕೆ ಕರೆಯುತ್ತಿದ್ದರು. ಅದು ಇದ್ದುದಕ್ಕಾಗಿ ಅವರು ಗುಡಿಸಲು ಕಟ್ಟಿಸುವ ಅವಶ್ಯಕತೆ ಬೀಳಲಿಲ್ಲ. ಅಲ್ಲಿಯೇ ಹೋಗಿ ವಾಸ ಮಾಡಿದರಂತೆ ಆವಾಗ ಅವರ ಕುಟುಂಬ ಅವಿಭಕ್ತ ಕುಟುಂಬವಾಗಿತ್ತು. ಎಲ್ಲರೂ ಅಲ್ಲಿಯೇ ಇದ್ದರು. ಎಲ್ಲ ವ್ಯವಸ್ಥೆಯು ಅಲ್ಲಿ ಅಳವಡಿಸಿದ್ದರು. ಬಾವಿ, ಪಾಯಖಾನೆ, ಕೊಟ್ಟಿಗೆ, ಇದ್ದವಲ್ಲದೆ ಸುತ್ತಲೂ ಬೈಲು ಜಾಗೆಯೂ ಸಾಕಷ್ಟು ಇತ್ತು. ದೇಸಾಯಿಯವರ ತಂದೆಗೆ ಹೂವಿನ ತೋಟದ ಹುಚ್ಚು ಬಹಳ. ಸಾಧ್ಯವಿದ್ದ ಹೂಗಿಡಗಳನ್ನು ಬೆಳೆಸಿದ್ದರಂತೆ. ಬಂಗಲೆಯ ಸುತ್ತಲಿನ ಜಮೀನುಗಳು ಇವರವೆ ಇದ್ದವು. ಅವುಗಳ ಬೇಸಾಯವನ್ನು ಸ್ವಂತವೇ ಮಾಡಿಸುತ್ತಿದ್ದರು. ಜೋಳವೇ ಇವರ ಮುಖ್ಯ ಬೆಳೆಯಾಗಿತ್ತು.

ಆಗ ಎಸ್.ಸಿ. ದೇಸಾಯಿಯವರ ತಂದೆಯದೇ ಹಿರಿತನ, ಇದ್ದದ್ದರಿಂದ ತಮ್ಮ ತಂಗಿಯರ ಮತ್ತು ತಮ್ಮಂದಿರ ಮದುವೆಗಳನ್ನು ಶ್ರೀಮಂತಿಕೆಗೆ ತಕ್ಕ ರೀತಿಯಲ್ಲಿ ತಮ್ಮ ಬಂಗಲೆಯಲ್ಲೇ ನೆರವೇರಿಸಿದರಂತೆ.

- ರಾಮನಗೌಡ
  - ೧ನೇ ಹೆಂ. ಅನ್ನಪೂರ್ಣಮ್ಮ
    - ಚಿದಂಬರಗೌಡ
      - ಹೆಂ. ಸರಸ್ವತಿಬಾಯಿ
        - ಮೋನಾಕ್ಕ
        - **ಎನ್.ಸಿ. ದೇಸಾಯಿ**
          - ಹೆಂ. ಶಾರದಾಬಾಯಿ
            - ಬಾಲಕೃಷ್ಣ
            - ವಿನೋದ
              - ಹೆಂ. ಭಾರತಿ
                - ಆದಿತ್ಯ
                - ಕಾರ್ತಿಕ್
            - ವಿದ್ಯಾ
        - ರತ್ನಕ್ಕ
    - ಬಸವನಗೌಡ
      - ಸೊವ್ವಾತ್ತಿ
      - ಇಂದಿರಕ್ಕಾ
      - ಬಾಪುಸಾಹೇಬ
        - ೧ನೇ ಹೆಂಡತಿ
        - ೨ನೇ ಹೆಂಡತಿ
          - ಲಕ್ಷ್ಮಿ
          - ಸುಧಿರ
      - ಕಿಷ್ಣ
      - ಮುರಳಿ
      - ಪುಷ್ಪ
      - ನಾರಾಯಣ
      - ರಾಮಚೇಂದ್ರ
  - ೨ನೇ ಹೆಂ. ಜಾನಕಿಬಾಯಿ
    - ಸುಂದರಬಾಯಿ
    - ಸರತಿಬಾಯಿ
    - ಶಾಂತಾಬಾಯಿ
    - ಕಮಲಾಬಾಯಿ
    - ಕುಶಲಾಬಾಯಿ
    - ಲಿಂಗನಗೌಡ
      - ಪ್ರಭಾ
        - ಗಂ. ನಾಯಕ
      - ಶಂಕರಗೌಡ
        - ಹೆಂ. ಕಮಲಾ
          - ವಿವೇಕ
      - ಅಶೋಕ
        - ಶಶಿಕಲಾ
          - ಅಭಯ
          - ಅಕ್ಷಯ
      - ಪ್ರಕಾಶ
        - ಹೆಂ. ಗೀತಾ
      - ಸುರೇಶ
        - ಹೆಂ. ವಿದ್ಯಾ
      - ಸುಧಾ
        - ಲಕ್ಷ್ಮಣರಾವ

ಹೆಂ = ಹೆಂಡತಿ

ಗಂ = ಗಂಡ

ಎಸ್.ಸಿ. ದೇಸಾಯಿವರ ಅಜ್ಜ ರಾಮನ ಗೌಡರ. ಇವರು ವಿದ್ಯಾವಂತರಿರಲಿಲ್ಲ. ಆಗಿನ ಕಾಲದಲ್ಲಿ ಜಮೀನುಗಳೂ ಬಹಳ ಅದರ ಉತ್ಪನ್ನವೂ ಚೆನ್ನಾಗಿತ್ತು. ಆದರೆ ಕೂತು ಉಂಡರೆ ಕುಡುಕೆ ಹೊನ್ನು ಸಾಲದು ಎಂಬ ತತ್ವವನ್ನು ಈ ಜನ ಲಕ್ಷಕ್ಕೆ ತಂದು ಕೊಂಡಿರಲಿಲ್ಲ ಎಂದು ತೋರುತ್ತದೆ. ಶ್ರಮವಹಿಸಿ ದುಡಿಯದಿರುವುದು ಹಾಗೂ, ಮುಂಜಿ ಮದುವೆ ಹಬ್ಬ-ಹುಣ್ಣಿಮೆಗಳಂಥ ಪ್ರಸಂಗದಲ್ಲಿ ದುಂದುವೆಚ್ಚ ಈ ರೀತಿಯಲ್ಲಿ ಎಸ್.ಸಿ. ದೇಸಾಯಿವರವರೆಗೂ ಹೀಗೆ ನಡೆಯಿತು. ಇವರ ಕಕ್ಕಂದಿರ ಮಕ್ಕಳ ಪಾಡು ಅದೆಯೇ ಆಯಿತು. ಈ ತಳಿಯ ಬಿ.ಎ.ದವರೆಗೆ ಓದಿದವನೆಂದರೆ ಒಬ್ಬನೇ ಒಬ್ಬನಂತೆ ಅವನು ಇವರ ಕಕ್ಕ ಲಿಂಗನಗೌಡರ ಮಗ ಅಶೋಕ ಒಬ್ಬನೇ ಮಾತ್ರ ಅವನು ಕೂಡ ಕಮಡೂಳ್ಳಿಯ ಎನ್.ಜಿ. ಕುಲಕರ್ಣಿಯವರ ಮನೆಯಲ್ಲಿದ್ದು ಹುಬ್ಬಳ್ಳಿ ವಾಸ್ತವ್ಯದಲ್ಲಿದ್ದು ಶಿಕ್ಷಣ ಮುಗಿಸಿದನು. ಉತ್ತಮ ನವಕರಿ ಮಾಡಿದ್ದೂ ಅವನೇ ಮಾತ್ರ.

ಕೆಲ ಜಮೀನುಗಳು ಕೋರ್ಟಿನ ವ್ಯಾಜ್ಯದಲ್ಲಿಯೂ ಇನ್ನುಳಿದ ಅವುಗಳು ಭಾರತ ಸ್ವಾತಂತ್ರ್ಯವಾದ ಮೇಲೆ "ಉಳುವವನೇ ಒಡೆಯ" ಕಾಯದೇ ಬಂದ ಮೇಲೆ ಲಾವಣಿ ಉಳುಮೆ ಮಾಡುತ್ತಿದ್ದ ರೈತರ ತಾಬಾ ವಶವಾಗಿ ಆಗಿ ಜಮೀನುಗಳು ಕರಗಿಹೋದವು. ಸಹಜವಾಗಿಯೇ ಬಡತನ ಮನೆಯನ್ನು ಆವರಿಸಿತು. ಏನಾದರೂ ಉತ್ತಮ ನವಕರಿ ಮಾಡಬೇಕೆಂದರೆ ಶಿಕ್ಷಣವಿಲ್ಲ ಇಂಥ ಪ್ರಸಂಗದಲ್ಲಿ ಸಿಕ್ಕಂಥ ನವಕರಿ ಮಾಡಿ ಬದುಕಬೇಕಾಯಿತು. ಒಂದು ವೈಭವಪೂರ್ಣ ಮನೆತನ ಈ ರೀತಿಯಾಗಿ ಹೀನಾವಸ್ಥೆಗೆ ಬಂತು ಎಂದು ಹೇಳುತ್ತಾರೆ.

## ಜನನ

ಇತಿಹಾಸ ಪ್ರಸಿದ್ಧವಾದ ಅಗಡಿಯ ಬಹದ್ದೂರ ದೇಸಾಯಿ ಮನೆತನದ ವಂಶೋದ್ಧಾರಕನ ಹುಟ್ಟಿನ ಬಗ್ಗೆ ಒಂದು ಪುಟ್ಟ ಇತಿಹಾಸವನ್ನು ಹೇಳುತ್ತಾರೆ. ಸುಮಾರು ೮೪ ವರುಷದ ಕೆಳಗೆ ನಡೆದ ಒಂದು ಚಿರಸ್ಮರಣೀಯ ದಿವ್ಯ ಘಟನೆ ಎಂದು ಇದರ ಬಗ್ಗೆ ಸದ್ಬೋಧ ಚಂದ್ರಿಕೆಯಲ್ಲಿ ಪ್ರಕಟವಾಗಿದೆ. ಅದರಲ್ಲಿ ಆಗಡಿಯ ಆನಂದವನದ ಅಡುಗೆ ಮನೆಯ ಹಿಂಬದಿಯ ಭಾಗದಲ್ಲಿ ಒಂದು ಬಾವಿಯಿದೆ. ಆ ಬಾವಿಯ ಪಕ್ಕದಲ್ಲಿ ಒಂದು ದೊಡ್ಡ ತೆಂಗಿನಮರ ಬೆಳೆದುನಿಂತಿತ್ತು. ಆದರೆ ಹತ್ತು ಇಪ್ಪತ್ತು ವರುಷವಾದರೂ ಫಲ ಬಿಟ್ಟಿರಲಿಲ್ಲ. ಕಾರಣ ಸೇವಕವರ್ಗ ಆಯುಧವನ್ನು ತಂದು ಗಿಡವನ್ನು ಕಡಿಯಲುದ್ಯುಕ್ತರಾದರು. ಅದೇ ವೇಳೆಗೆ ಸರಿಯಾಗಿ ನಾರಾಯಣ ಭಗವಾನರು ಅಲ್ಲಿಗೆ ಆಗಮಿಸಿದರು. ಅಲ್ಲಿ ಕಡಿಯಲನುವಾದ ಸೇವಕರನ್ನು ಕುರಿತು "ಹಾ ಏನು ನಡೆಸಿರುವಿರಿ" ಎಂದು ಕೇಳಿದರು. "ಸ್ವಾಮಿ ಉಪಯೋಗವಿಲ್ಲದ ಈ ಬಂಜೆಗಿಡವನ್ನು ಕಡಿಯಬೇಕೆಂದು ನಿರ್ಧರಿಸಿದ್ದೇವೆ" ಎಂದರು. ಸೇವಕರು "ಹಾ ತಡೆಯಿರಿ ಹಾಗೆ ಮಾಡಬೇಡಿರಿ. ಅದು ಬಂಜೆಗಿಡವಲ್ಲ, ಕಲ್ಪವೃಕ್ಷ, ಈ ಕಲ್ಪವೃಕ್ಷದಿಂದ ಒಂದು ಮಹತ್ವದ ಕೆಲಸವಾಗಬೇಕಾಗಿದೆ" ಎಂದು ಹೇಳಿದರಂತೆ. ಮುಂದೆ ಕೆಲದಿನಗಳಲ್ಲಿ ಆ ತೆಂಗಿನ ಮರ ಕಡಿಯುವುದನ್ನು ಬಿಡಿಸಿದ್ದರು. ಆ ತೆಂಗಿನ ಮರವು

ಫಲ ಕೊಟ್ಟಿದ್ದು ಒಂದೇ ಒಂದು ಮಾತ್ರ ಅದೇ ಫಲವನ್ನು ಭಗವಾನರು ಶ್ರೀ ಶೇಷಾಚಲೇಶ್ವರನ ಬದಿಯಲ್ಲಿ ತಂದಿರಿಸಿದ್ದರು. ಆ ಮಹತ್ವ ಪೂರ್ಣವಾದ ತೆಂಗಿನಕಾಯಿಯನ್ನು (ಪೂರ್ಣಫಲವನ್ನು) ಶ್ರೀ ಚಿದಂಬರಗೌಡರ ಉಡಿಯಲ್ಲಿ ಹಾಕಿ ದಂಪತಿಗಳನ್ನು ಆಶೀರ್ವದಿಸಿ ಕಳಿಸಿಕೊಟ್ಟರು. ಇದನ್ನು ಭಗವಾನರು ಹಾಗೂ ಕುಲದೇವರ ಪಕ್ಕದಲ್ಲಿರಿಸಿ ನಿತ್ಯ ಪೂಜಿಸಲು ತಿಳಿಸಿದರು.

ಭಗವಾನರ ಆರ್ಶೀವಾದದ ಕೃಪೆಯಿಂದ ಚಿದಂಬರಗೌಡರ ಪತ್ನಿ ಸರಸ್ವತಿ ಬಾಯಿಯವರು ಗಂಡುಮಗುವಿನ ತಾಯಿಯಾದರು. ಆ ದಿನಾಂಕ ೪ ಏಪ್ರಿಲ್ ೧೯೨೪ರಂದು ವರಪುತ್ರಗೆ ಅಗಡಿಯಲ್ಲಿ ಜನ್ಮ ನೀಡಿದರು. ಅವರ ಪುತ್ರನಿಗೆ 'ನಾರಾಯಣ'ನೆಂದು ನಾಮಕರಣ ಮಾಡಿದರು. ಭಗವಾನರು ಮಗು ಬೆಳೆದ ನಂತರ ನಾರಾಯಣ ಎಂಬ ಹೆಸರು ನಾನಾಸಾಹೇಬ ಎಂದು ಮನೆತನದ ರೂಢಿಗನುಸರಿಸಿ ಪರಿವರ್ತಿಸಲ್ಪಡುವುದು ಎಂದು ನುಡಿದರು. ಇವರ ಶಿಕ್ಷಣ ದಾಖಲೆಗಳಲ್ಲಿರುವ ಪೂರ್ಣ ಹೆಸರು. ನಾನಾಸಾಹೇಬ ಚಿದಂಬರಗೌಡ ಬಹದ್ದೂರು ದೇಸಾಯಿ ಎಂದು ಬರೆಯಲಾಗಿದೆ. ನಂತರ ನಾನಾಸಾಹೇಬರು ಗುರ್ತಿಸಿಕೊಂಡಿದ್ದು, ನಾನಾಸೇಹಬ ಊರ್ಫ್ ಎನ್.ಸಿ. ದೇಸಾಯಿ ಎಂದು.

## ಬಾಲ್ಯ ಮತ್ತು ಸಾಮಾನ್ಯ ಶಿಕ್ಷಣ

ಎನ್.ಸಿ. ದೇಸಾಯಯವರ ಬಾಲ್ಯವನ್ನೆಲ್ಲಾ ಅಗಡಿಯ ವಾಡೆದಲ್ಲಿ ಕಳೆದರು. ಕನ್ನಡ ಗಂಡು ಮಕ್ಕಳ ಶಾಲೆಯೂ ವಾಡೆದಲ್ಲಿಯೇ ಇದ್ದಿತು. (ಆಕಾಲ) ಅವರು ಆ ಶಾಲೆಯ ವಿದ್ಯಾರ್ಥಿ. ಅಲ್ಲಿ ಆಗ ಕಮಡೊಳ್ಳಿ ಎಂಬ ಅಡ್ಡ ಹೆಸರಿನ ಶಿಕ್ಷಕರೊಬ್ಬರಿದ್ದರು, ಅವರ ಪತ್ನಿಯೂ ಹೆಣ್ಣುಮಕ್ಕಳ ಶಾಲೆಯಲ್ಲಿ ಅಧ್ಯಾಪಕಿ. ಕಮಡೊಳ್ಳಿಯವರು ಎನ್.ಸಿ. ದೇಸಾಯಿಯವರಿಗೆ ಮನೆಯಲ್ಲಿಯೆ ಪಾಠ ಹೇಳಿಕೊಡುತ್ತಿದ್ದರು. ಆ ಶಿಕ್ಷಕರು ಆಗಾಗ ಅವರಿವರೆದುರು "ಆ ಹುಡುಗ ಬಹಳ ಚುರುಕು" ಎಂದು ಹೇಳುತ್ತಿದ್ದನ್ನು ಎನ್.ಸಿ. ದೇಸಾಯಿ ಕೇಳಿಸಿಕೊಂಡಿದ್ದರಂತೆ. (ಇದರ ವಿವರ ಡೈರಿಯಲ್ಲಿ ಬರೆದಿದ್ದಾರೆ.) ಇವರ ಅಭ್ಯಾಸ ಸುಗಮವಾಗಿಯೇ ಸಾಗಿತ್ತು.

ಇವರ ಶಿಕ್ಷಣ ಕ್ರಿ.ಶ. ೧೯೩೧ನೇ ಇಸ್ವಿಯಲ್ಲಿ ಬಂದ ಪ್ಲೇಗಿನಿಂದಾಗಿ ಊರು ಬಿಟ್ಟು ಆನಂದವನದ ಮಗ್ಗುಲಲ್ಲಿ ಇದ್ದ ಬಂಗಲೆಯಲ್ಲಿಯೇ ಮುಂದುವರಿಯಿತು. ಆನಂತರ ಇಲ್ಲಿಗೆ ಬಂದು ಉಳಿದ ಊರಜನ ಮತ್ತೆ ತಮ್ಮ ತಮ್ಮ ಮನೆಗೆ ಮರಳಿದರೂ ಇವರ ತಂದೆ ಇಲ್ಲಿಗೆ ಇಲ್ಲಿಯೇ ತಮ್ಮ ವಾಸ್ತವ್ಯವನ್ನು ಮುಂದುವರಿಸಿದರು. ಅವರ ಅವಿಭಾಜ್ಯ ಕುಟುಂಬದಲ್ಲಿ ಇಬ್ಬರು ಮಕ್ಕಳು ತೀರಿ ಉಳಿದವರು ಎನ್.ಸಿ. ದೇಸಾಯಿವರೊಬ್ಬರೆ ಅಷ್ಟು ದೂರ ಊರಲ್ಲಿ ಇದ್ದ ಶಾಲೆಗೆ ಇವರನ್ನು ಕಳಿಸಲು ಇವರ ತಾಯಿ ಒಪ್ಪಲಿಲ್ಲ. "ದಡ್ಡನಾಗಲೀ ಹುಚ್ಚನಾಗಲೀ ನನ್ನ ಮಗ ಬದುಕಿ ಉಳಿದರೆ ಸಾಕು" ಎಂಬುದೇ ಇವರ ತಾಯಿಯ ಅಪೇಕ್ಷೆ. ತಂದೆಯವರೂ ಮಗ ಕಲಿಯಲಿ ಎಂದು ಒತ್ತಾಯಿಸಲಿಲ್ಲವಂತೆ. ಜಮೀನುದಾರಿಕೆಯು ಮಾಡಿದರೆ ಸಾಕು ಎಂಬುದು ಅವರ ಮನದಾಸೆಯಾಗಿತ್ತು ಅಂತೂ ಪ್ರಾಥಮಿಕ ಶಿಕ್ಷಣದ ಇತಿಶ್ರೀ ಹೀಗಾಯಿತಂತೆ.

ಆನಂದವನದ ಪರಿಸರದಲ್ಲಿ ಅಲ್ಲಿದ್ದ ಹುಡುಗರ ಜೊತೆ ಗಿಡ ಮಂಗನ ಆಟವಾಡುವುದು ಮತ್ತು ಸ್ವಾಮಿಯ ಸೇವೆಯು ಸಂದರ್ಭ ತಕ್ಕ ಮಟ್ಟಿಗೆ ಮಾಡುವ ಅವಕಾಶ ದೊರೆಯುತ್ತಿತ್ತಂತೆ. ಅಲ್ಲಿ ಶೇಷಾಚಲ ಸಾಧುಗಳ ಸೊಸೆಯ ಸೋದರ ಅಳಿಯ ಸೋಮಣ್ಣನ ಜೊತೆಗೆ ಗಾಢ ಸ್ನೇಹ ಅಲ್ಲಿಯೇ ಬೆಳೆಯಿತಂತೆ. ಇದರ ವಿವರವನ್ನು ಎನ್.ಸಿ. ದೇಸಾಯಿವರು ತಮ್ಮ ದಿನಚರಿಯಲ್ಲಿ ದಾಖಲಿಸಿದ್ದಾರೆ.

ಆ ಸಮಯದಲ್ಲಿ ಮನೆಯಲ್ಲಿದ್ದ ಬೇಸಾಯ ಒಕ್ಕಲುತನದ ಕಾರ್ಯವನ್ನು ಎನ್.ಸಿ. ದೇಸಾಯಿಯವರೆ ನೋಡಿಕೊಳ್ಳುತ್ತಿದ್ದರಂತೆ. ಬಂಗಲೆಯ ಸುತ್ತಮುತ್ತಲಿನ ಕೆಲ ಜಮೀನುಗಳನ್ನು ಅವರೇ ಸ್ವತಃ ಸಾಗುವಳಿ ಮಾಡುತ್ತಿದ್ದರಂತೆ.

ಶಾಲಾ ಶಿಕ್ಷಣ ಮುಗಿಯದಿದ್ದರೂ ಆನಂದವನದ ಹತ್ತಿರದ ವಾಸ್ತವ್ಯ ಇವರಿಗೆ ಇನ್ನೊಂದು ರೀತಿಯಲ್ಲಿ ಲಾಭದಾಯಕವಾಯಿತು! ಅಲ್ಲಿದ್ದ ಸದ್ಬೋಧ ಚಂದ್ರಿಕೆ ಕಾರ್ಯಾಲಯ ಹಾಗೂ ಅಲ್ಲಿಗೆ ಚಂದ್ರಿಕೆಗೆ ವಿನಿಮಯವಾಗಿ ಬರುತ್ತಿದ್ದ ಇತರೆ ಪತ್ರಿಕೆಗಳು ಇವರಿಗೆ ಓದಲು ಲಭ್ಯವಾಗುತ್ತಿದ್ದುದೊಂದು ವಿಶೇಷ ಸೌಕರ್ಯವಾಗಿ ಪರಿಣಮಿಸಿತು. ಈ ಸಂದರ್ಭ ಪರೋಕ್ಷವಾಗಿ ಸಾಹಿತ್ಯದ ಅಭಿರುಚಿಯನ್ನು ಬೆಳೆಸಿತು.

ಪತ್ರಿಕೆಗಳಲ್ಲದೇ ಅಲ್ಲಿದ್ದ ಗಳಗನಾಥರು ಮತ್ತಿತರರ ಸಾಹಿತಿಗಳ ಕಾದಂಬರಿಗಳನ್ನು ಓದುವ ಭಾಗ್ಯ ಇವರಿಗೆ ಒದಗಿಬಂತು. ಆಗ ಇವರಲ್ಲಿ ಉಂಟಾಗಿರುವ ಸಾಹಿತ್ಯಿಕ ಪ್ರವೃತ್ತಿನಿಗೆ ಆ ಸಂದರ್ಭವೇ ಮೂಲ ಕಾರಣವಾಯಿತು. ಈ ರೀತಿಯಾಗಿ ಎನ್.ಸಿ. ದೇಸಾಯಿವರು ಶಾಲೆಗೆ ಹೋಗದಿದ್ದರೂ ಶಾಲಾಶಿಕ್ಷಣದ ಹೊರತಾಗಿ ಭಾಷಾ ಶಿಕ್ಷಣ ಸಾಹಿತ್ಯಕ ಪರಿಚಯ ಅವರಲ್ಲಿ ಅವರಿಗರಿವಿಲ್ಲದೇ ಬೆಳೆದುಕೊಂಡು ಬರುತ್ತಿತ್ತಂತೆ. ಆದರೂ ಆ ಸಂದರ್ಭದಲ್ಲಿ ಮತ್ತೆ ಶಾಲೆಯ ಶಿಕ್ಷಣ ಮುಂದುವರಿಸುವ ಸುಯೋಗ ಒಂದು ಬಂದೂ ಮಾಯವಾಯಿತಂತೆ. ಅವರ ತಂದೆಯವರು/ಪ್ರಸಿದ್ಧ ಶಿಕ್ಷಣ ತಜ್ಞರೂ, ಸಾಹಿತಿಗಳು ಹಾಗೂ ಕಾಲೇಜಿನಲ್ಲಿ ಪ್ರೊಫೆಸರ್ ಆಗಿದ್ದು, ಮೈಸೂರಿನಲ್ಲಿದ್ದ ಟಿ.ಎಸ್. ವೆಂಕಣ್ಣಯ್ಯ ಅವರ ಮನೆಯಲ್ಲಿದ್ದು ಕಲಿಯುತ್ತಿದ್ದರಂತೆ. ೧೯೧೮ರಲ್ಲಿ ಎನ್.ಸಿ. ದೇಸಾಯಿಯವರ ಅಜ್ಜ ಹಾಗೂ ಅವರ ತಮ್ಮ ಅಲ್ಪ ಕಾಲಾವಧಿಯಲ್ಲಿಯೇ ತೀರಿಕೊಂಡಿದ್ದರಿಂದ ಅವರ ತಂದೆಯವರು ಶಿಕ್ಷಣ ಅಲ್ಲಿಗೇ ಮುಗಿಸಿ ಅಗಡಿಗೆ ಮರಳಿದರು.

ಪ್ರೊ. ವೆಂಕಣ್ಣಯ್ಯನವರ ಮನೆತನಕ್ಕೂ ಎನ್.ಸಿ. ದೇಸಾಯಿವರ ಮನೆತನಕ್ಕೂ ಏನು ಸಂಬಂಧ ಯಾವ ಸಂಬಂಧ ಎಂಬುದನ್ನು ಎನ್.ಸಿ. ದೇಸಾಯಿಯುವರ ಅವರ ನೆನಪುಗಳ ಪುಸ್ತಕದಲ್ಲಿ ಬರೆದಿದ್ದಾರೆ. ವೆಂಕಣ್ಣಯ್ಯನವರ ತಂದೆಯವರು ಶೇಷಾಚಲ ಸಾಧುಗಳ ಪರಮಭಕ್ತರು ಅವರ ಮನೆತನ ಉದ್ಧಾರವಾದುದೇ ಸಾಧುಗಳ ಕೃಪಾರ್ಶೀರ್ವಾದದಿಂದ ಎಂದು ಇವರ ಹಿರಿಯರಿಂದ ಕೇಳಿ ತಿಳಿದಿದರಂತೆ ವೆಂಕಣ್ಣಯ್ಯನವರ ಪೂರ್ಣ ಹೆಸರು ಇಂತಿದೆ. ತಳ್ಳುಕ ಸುಬ್ಬರಾಯರ ಮಗ ವೆಂಕಣ್ಣಯ್ಯ ಎಂದು. ಕನ್ನಡ ಸಾಹಿತ್ಯ ಲೋಕದಲ್ಲಿ ಅವರ ಹೆಸರು ಅಜರಾಮರ.

ಅವರ ತಮ್ಮಂದಿರೇ ತ.ಸು. ಶಾಮರಾಯರು ಅವರು ಕೂಡ ಸಾಹಿತಿ ಅವರು ಶಿಕ್ಷಣ ತಜ್ಞರು ದಾವಣಗೇರಿಯಲ್ಲಿ ಹೊಸದಾಗಿ ಸರಕಾರಿ ಕಾಲೇಜು ಪ್ರಾರಂಭವಾದಾಗ ಶಾಮರಾಯರು ಒಬ್ಬ ಪ್ರಾಧ್ಯಾಪಕರಾಗಿ ಅಲ್ಲಿಗೆ ಬಂದರು. ಈ ಸುಸಂಧಿಯನ್ನು ಉಪಯೋಗಿಸಿಕೊಳ್ಳಬೇಕೆಂದು ಎನ್.ಸಿ. ದೇಸಾಯಿಯವರ ತಂದೆಯವರು ಅವರಲ್ಲಿ ಹೋಗಿ ತಮ್ಮ ಮಗನನ್ನು ಮನೆಯಲ್ಲಿಟ್ಟು, ವಿದ್ಯಾಭ್ಯಾಸದ ಅನುಕೂಲ ಮಾಡಿಕೊಡಲು ಕೇಳಿಕೊಂಡಿದ್ದರಂತೆ. ಅದಕ್ಕೆ ಶಾಮರಾಯರು ಮತ್ತು ಅವರ ಪತ್ನಿ ಬಹು ಸಂತೋಷದಿಂದ ಒಪ್ಪಿದ್ದರು. ಎನ್.ಸಿ. ದೇಸಾಯಿಯವರನ್ನು ದಾವಣಗೆರಿಗೆ ಕಳಿಸುವ ಎಲ್ಲ ಸಿದ್ಧತೆಗಳೂ ಮುಗಿದಿದ್ದವು. ಇನ್ನೇನು ಎರಡು ಮೂರು ದಿನಗಳಲ್ಲಿಯೇ ಹೊರಡಬೇಕು. ಆಗಲೂ ವಿಧಿ ಅವರ ಬೆನ್ನು ಬಿಟ್ಟಿರಲಿಲ್ಲ.

ಎನ್.ಸಿ. ದೇಸಾಯಿಯರು ಬಲಗಣ್ಣು ಊದಿತು ಹಾಗೂ ಕೆಳಗಡೆ ರಪ್ಪೆಯಿಂದ ಕೆಟ್ಟರಕ್ತ ಕೀವು ಬರಲು ಪ್ರಾರಂಭವಾಯಿತು. ಆವಾಗ, ಹಾವೇರಿಯಲ್ಲೂ ಕೂಡ ಅಲೋಪಥಿ ಡಾಕ್ಟರುಗಳು ಅಷ್ಟು ಹೆಚ್ಚು ಸಂಖ್ಯೆಯಲ್ಲಿರಲಿಲ್ಲವಂತೆ ಯಾವುದೇ ರೋಗಪಿದ್ದರೂ ಕರಜಗಿಯಿಂದ ಒಬ್ಬ ಆಚಾರ್ಯ ವೈದ್ಯರು ಬರುತ್ತಿದ್ದರಂತೆ. ಅವರನ್ನು ಕರೆತರಲು ಹೋದಾಗ ಅವರನ್ನು ಕರೆತರಲು ಹೋದಾಗ ಅವರನ್ನು ಝಟಕಾ ಬಂಡಿಯಲ್ಲಿ ಬಂದರು ಅದೇ ಆಗಿನ ಕಾಲದ ವಾಹನವಾಗಿತ್ತು. ಸುತ್ತಮುತ್ತಲ ಹಳ್ಳಿಗಳಲ್ಲಿ ಅವರಿಗೆ ಬೇಡಿಕೆ ಬಹಳವಿತ್ತು. ವೈದ್ಯರು ಹೇಳಿದರಂತೆ "ಇದೇನು ಅಂಥ ದೊಡ್ಡ ರೋಗವಲ್ಲ. ದುರ್ಮಾಂಸ ಬೆಳದಿದ್ದೆ ೩-೪ ದಿನಗಳಲ್ಲಿ ಕಡಿಮೆಯಾಗುತ್ತದೆ" ಎಂದು ಹೇಳಿದರೂ ಕೂಡ ನನ್ನ ತಾಯಿ ನನ್ನನ್ನು ಕಳಿಸಲು ಒಪ್ಪಲಿಲ್ಲ. ಇದ್ದ ಒಬ್ಬ ಮಗ ಕಣ್ಣೆದುರಿಗೆ ಇರಲಿ, ದೂರದ ಊರಲ್ಲಿ ಏನಾದರೂ ತೊಂದರೆಯಾದರೆ ಹೇಗೆ? ಎಂಬ ಚಿಂತೆ ಅದೇ ತತ್ವದ ಮೇಲೆಯೇ ದಾವಣಗೇರೆಗೆ ಕಳಸುವುದನ್ನೂ ರದ್ದುಪಡಿಸಿದರು. ಶಿಕ್ಷಣಕ್ಕಾಗಿ ಒದಗಿಬಂದ ಅವಕಾಶ ಹೀಗೆ ಕಳೆದುಹೋಯಿತಂತೆ.

ಒಂದು ವೇಳೆ ಎನ್.ಸಿ. ದೇಸಾಯಿಯವರು ದಾವಣಗೇರಿಗೆ ಹೋಗಿ ತ.ಸು. ಶಾಮರಾಯರಂಥವರ ಕೈಯಲ್ಲಿ ಆಶ್ರಯದಲ್ಲಿ ಬೆಳೆದಿದ್ದರೆ, "ನನ್ನ ಜೀವನದ ದಿಕ್ಕೇ ಬದಲಾಗುತ್ತಿತ್ತೆಂಬುದಕ್ಕೆ ಯಾವ ಸಂದೇಹವೂ ಇಲ್ಲ. ಆದರೆ ನಸೀಬ ಖೋಟ್ಟಿಯಾಗಿತ್ತು" ಎಂದು ತಮ್ಮ ತಳಮಳವನ್ನು ದಿನಚರಿಯಲ್ಲಿ ತೊಡಿಕೊಂಡಿದ್ದಾರೆ.

ಆಗಿನ ಕಾಲದಲ್ಲಿ ಅವರ ಊರಿನಲ್ಲಿ ಪ್ರಾಥಮಿಕ ಶಾಲೆ ಉತ್ತಮ ಕ್ಷಣಕ್ಕೆ ಪ್ರಸಿದ್ಧಿಯಾಗಿತ್ತು. ಉತ್ತಮ ಶಿಕ್ಷಕರೂ ಸುದೈವದಿಂದ ಆ ಶಾಲೆಗೆ ವರ್ಗವಾಗಿ ಬರುತ್ತಿದ್ದರು. ಅಲ್ಲದೇ ಆ ಶಿಕ್ಷಕರು ಆಸ್ಥೆಯಿಂದ ಪಾಠ ಹೇಳುತ್ತಿದ್ದರು. ಮುಲಕೀ ಪರೀಕ್ಷೆಗೆಂದು ಪರವಾದ ವಿದ್ಯಾರ್ಥಿಗಳು ಬರುತ್ತಿದ್ದರು. ಆ ಕಾಲದಲ್ಲಿ ರಾ.ದೆ.ಕುಲಕರ್ಣಿಯೆಂಬುವರು ಮುಖ್ಯೋಪಾಧ್ಯಪಕರಾಗಿದ್ದರು. ಅವರು ಬ್ರಾಹ್ಮಣರೆ ಆಗಿದ್ದು, ವೈಷ್ಣವರಾಗಿದ್ದರು. ಸಹಜವಾಗಿಯೇ ಕಟ್ಟಾ ಮಡಿವಂತರಾಗಿದ್ದರು. ಶಾಲೆಗೆ ಬರುವಾಗ ಹಾಕುವ ಪೋಷಾಕೇ ಬೇರೆ, ಮನೆಗೆ ಹೋಗಿ ಅದನ್ನು ಬದಲಾಯಿಸಿ ಸ್ನಾನವಾದ ಮೇಲೆಯೇ ಮುಂದಿನ ಮನೆಗೆಲಸ. ಶಾಲೆಯಲ್ಲಿ ಅಸ್ಪೃಶ್ಯ ವಿದ್ಯಾರ್ಥಿಗಳೂ ಇರುತ್ತಿದ್ದರೆಂಬುದೇ ಇದರ ಹಿನ್ನೆಲೆಯಾಗಿತ್ತಂತೆ. ಅದೇ ಸಮಯದಲ್ಲಿ ಪುರಾಣಿಕ

ರಾ.ನ. ಗುಡಿ ವರಹಮೂರ್ತಿ ಎಂಬ ಮುಂತಾದ ಕೆಲ ಶಿಕ್ಷಕರೂ ಇದ್ದರಂತೆ. ಎಲ್ಲರದೂ ಕಲಿಸುವುದರಲ್ಲಿ ಅಷ್ಟೇ ಆಸ್ಥೆ. ರಾ.ನ. ಗುಡಿಯವರಿಗೆ ಚಿತ್ರಕಲೆಯಲ್ಲಿ ಒಂದಿಷ್ಟು ಆಸ್ಥೆ ಇತ್ತು. ಹೀಗಾಗಿ ಹಿಂದುಗಡೆಯಿಂದ ಅಂದರೆ ನನ್ನ ಚಿತ್ರ ಕಲೆಯಲ್ಲಿಯ ಪ್ರತಿಭೆಯನ್ನು ಗುರುತಿಸಿದ ನಂತರ ನನಗಿಷ್ಟು ಆ ವಿಷಯದಲ್ಲಿ ದಾರಿ ತೋರಿಸಿದ್ದೂ ಉಂಟು ಎಂದು ದಿನಚರಿಯಲ್ಲಿ ವ್ಯಕ್ತಪಡಿಸಿದ್ದಾರೆ.

ಪರ ಊರಿನಿಂದ ಬಂದ ವಿದ್ಯಾರ್ಥಿಗಳಲ್ಲಿ ಯಲಗಚ್ಚಿನ, ಮಧ್ವ ಮನ್ನಾರಿಯಂಬುವನೊಬ್ಬನೊಂದಿಗೆ ಎನ್.ಸಿ. ದೇಸಾಯಿಯವರ ಸ್ನೇಹ ಬೆಳೆಯಿತು. ಮುಂದೆ ಅದು ಹುಬ್ಬಳ್ಳಿಯ ವಾಸದಲ್ಲಿ ಗಾಢವಾಯಿತು.

ಎನ್.ಸಿ. ದೇಸಾಯಿಯವರ ತಂದೆ ಅನಾರೋಗ್ಯದಿಂದಾಗಿ ಚಿಕಿತ್ಸೆಗೆಂದು ಅಗಡಿಯಿಂದ ಹುಬ್ಬಳ್ಳಿಗೆ ಹೋಗಬೇಕಾಯಿತು. ಅಲ್ಲಿ ವಿದ್ಯಾಭ್ಯಾಸ ಮುಂದುವರಿಸಲು ಹಟ ಹಿಡಿದರಂತೆ. ಈಗಾಗಲೇ ಎನ್.ಸಿ. ದೇಸಾಯಿಯವರೆಗೆ ಶಾಲೆ ಕಲಿಯುವ ವಯಸ್ಸು ಮೀರಿದ್ದು ಯಾವ ಶಾಲೆಯಲ್ಲೂ ಅವರನ್ನು ಸೇರಿಸಿಕೊಳ್ಳಲು ಒಪ್ಪುತ್ತಿರಲಿಲ್ಲವಂತೆ.

ಈ ವೇಳೆ ಮಧ್ವಮನ್ನಾರಿಯಂಬವನು, ಎನ್.ಸಿ. ದೇಸಾಯಿಯವರ ಊರಿನವನು ಕಲಿಯಲಿಕ್ಕೆದ್ದವನು, ಮೂಲ್ಕಿ ಪರೀಕ್ಷೆ ಮುಗಿಸಿ ಹೈಸ್ಕೂಲು ಅಭ್ಯಾಸಕ್ಕೆ ಹುಬ್ಬಳ್ಳಿಗೆ ಬಂದಿದ್ದನು. ಹೊಸ ಹುಬ್ಬಳ್ಳಿಯ ಕಿಲ್ಲೆದಲ್ಲಿ ಕಟಕೋಳ ಎಂಬುವವರ ಮನೆಯಲ್ಲಿರುತ್ತಿದ್ದನಂತೆ. ನ್ಯೂ ಇಂಗ್ಲಿಷ್ ಹೈಸ್ಕೂಲ್ ವಿದ್ಯಾರ್ಥಿಯಾಗಿ ಅಗಡಿಯ ಹಳೆ ಸ್ನೇಹ ಇಲ್ಲಿಯೂ ಮುಂದುವರೆಯಿತಂತೆ. ಮನ್ನಾರಿಗೆ ಪಿ.ಕೆ. ಬೆಂಗೇರಿಯಂಬುವರು ಸಿಟಿ ಹೈಸ್ಕೂಲು ಎಂಬ ಶಾಲೆಯನ್ನು ಕೆಲ ಸ್ನೇಹಿತರೊಂದಿಗೆ ತೆರದಿದ್ದೂ ಸಹಜವಾಗಿಯೇ ಆ ಹೊಸ ಶಾಲೆಗೆ ವಿದ್ಯಾರ್ಥಿಗಳ ಅವಶ್ಯಕತೆ ಇತ್ತು. ಆ ಸಂದಿಗ್ಧ ಪರಿಸ್ಥಿತಿ ಎನ್.ಸಿ. ದೇಸಾಯಿಯವರಿಗೆ ಅನುಕೂಲವಾಯಿತು. ಅಲ್ಲಿ ಮನ್ನಾರಿಯ ಗೆಳೆಯ ಬೆಂಗೇರಿ ಮುಖಾಂತರ ಅವರ ತಂದೆಯವರನ್ನು ಕಂಡರಂತೆ. ಅವರೇ ಸಿಟಿ ಹೈಸ್ಕೂಲಿನ ಪ್ರಿನ್ಸಿಪಾಲರಾಗಿದ್ದರು. ಪ್ರವೇಶ ದೊರೆಯುವ ಭರವಸೆ ದೊರೆತ ಮೇಲೆಯೇ ಅವರ ತಂದೆಯವರಿಗೆ ತಿಳಿಸಿ ಪುಸ್ತಕ, ಫೀ ಮುಂತಾದವುಗಳಿಗೆ ಬೇಕಾದ ಹಣದ ವ್ಯವಸ್ಥೆ ಮಾಡಿಕೊಂಡು ಹೈಸ್ಕೂಲು ಪ್ರವೇಶಿಸಿದರಂತೆ.

ನಿಜವಾಗಿ ಹೈಸ್ಕೂಲಿನಲ್ಲಿ ಪ್ರವೇಶ ಸಿಕ್ಕಿದ್ದೇ ಮಹಾ ಆಶ್ಚರ್ಯ, ಕಾರಣ ಮೂಲ್ಕಿ ಪರೀಕ್ಷೆ ಪಾಸಾಗಿದ್ದರೆ ಮಾತ್ರ ನೇರ ೯ನೇ ಇಯತ್ತೆಗೆ ಪ್ರವೇಶ ಸಿಗುತ್ತಿತ್ತು ಇಲ್ಲವಾದರೆ, ಇಂಗ್ಲೀಷ್ ಒಂದನೆ ಕ್ಲಾಸಿನಿಂದಲೇ ಮೆಟ್ಟಿಲು ಹತ್ತಬೇಕಿತ್ತು. ಅಂತೂ ಎನ್.ಸಿ. ದೇಸಾಯಿಯವರೆಗೆ ಪ್ರವೇಶ ದೊರಕಿತು. ೯ನೇ ಕ್ಲಾಸಿಗೆ ಪ್ರವೇಶ ಕೊಟ್ಟಿದ್ದು. ಆದರೆ ಅವರು ಹೊರಗಡೆ ಖಾಸಗಿ ಪಾಠ ತೆಗೆದುಕೊಂಡು ಪ್ರವೇಶ ಸಿಕ್ಕ ಕ್ಲಾಸಿಗೆ ಸರಿ ಹೋಗುವಂತೆ ಅಭ್ಯಾಸ ಮುಗಿಸಿ ತೋರಿಸಬೇಕೆಂಬ ಕಟ್ಟಳೆ ಹಾಕುತ್ತಿದ್ದರಂತೆ. ಅದೇ ಹೈಸ್ಕೂಲಿನಲ್ಲಿ ಬ್ಯಾಹಟ್ಟಿ ಮತ್ತು ಜಕಾತಿ ಎಂಬುವವರೂ ಶಿಕ್ಷಕರಿದ್ದರಂತೆ ಅವರ ಮನೆಗಳಿಗೆ ಹೋಗಿ ಟ್ಯೂಶನ್ ಹೇಳಿಸಿಕೊಳ್ಳುತ್ತಿದ್ದರಂತೆ. “ಹುಡುಗ ಹುಷಾರಿದ್ದಾನೆ” ಎಂಬ ಶಹಬಾಸಗಿರಿಯನ್ನೂ ಅವರಿಂದ ಪಡೆಯುತ್ತಿದ್ದರಂತೆ ಈ ಅಧ್ಯಾಪಕರು

ಹೇಳಿದ್ದನ್ನು ತಿಳಿದುಕೊಳ್ಳುವ ಬುದ್ಧಿಯಂತೂ ನಿಶ್ಚಯವಾಗಿಯೂ ಇವರಲ್ಲಿ ಇತ್ತು

ಆ ಸಿಟಿ ಹೈಸ್ಕೂಲು - ನ್ಯೂ ಇಂಗ್ಲಿಷ್ ಹೈಸ್ಕೂಲ ಹತ್ತಿರ ಸಿ.ಬಿ.ರೋಡ್‌ನಲ್ಲಿತ್ತು. ಆದರೆ ಸರಿಯಾದ ಅಂಚೆ ವಿಳಾಸದ ವಿವರ ದೊರೆತಿಲ್ಲ. ಆಗ ಅದು ಹಳೆ ಕಟ್ಟಡ ಎರಡಂತಿಸ್ತಿನ ಇಮಾರತು ಈ ಕಟ್ಟಡ ಅಲ್ಲದೇ ಹತ್ತಿರದಲ್ಲಿ ಇನ್ನೂ ಒಂದು ಕಟ್ಟಡವನ್ನೂ ಬಾಡಿಗೆ ಹಿಡಿದಿದ್ದ ಅಲ್ಲಿ ಚಿಕ್ಕ ಆಟದ ಮೈದಾನವಿತ್ತು. ಆಗ ಅವರ ಅಲ್ಲಿ ಆಡಲು ಹೋಗುತ್ತಿದ್ದರಂತೆ.

ಎನ್.ಸಿ. ದೇಸಾಯಯಿಯವರ ತಂದೆ ಇವರಿಗೆ "ಮಿತ್ರ ಸಮಾಜ" ಎಂಬ ಹೋಟೆಲಿನಲ್ಲಿ ಇರಲು ವ್ಯವಸ್ಥೆ ಮಾಡಿದ್ದರು. "ಮಿತ್ರ ಸಮಾಜ" ಗಾಂಧಿ ಮಾರ್ಕೆಟ್ಟಿನ ಹಿಂಬದಿಯಲ್ಲಿದೆ. ಆಗ ಅದು ಹುಬ್ಬಳ್ಳಿಗೇ ದೊಡ್ಡ ಹೋಟೆಲು ಅದರಲ್ಲಿ ಒಂದು ರೂಮಿನ ಬಾಡಿಗೆ, ಎರಡು ಹೊತ್ತು ಚಹ ಎರಡು ಊಟ ಇಷ್ಟೊ ಸೇರಿ ತಿಂಗಳಿಗೆ ರೂ. ೧೮ (ಹದಿನೆಂಟು ರೂಪಾಯಿ ಕೊಡುತ್ತಿದ್ದಂತೆ), ಸಿಟಿ ಹೈಸ್ಕೂಲಿನಲ್ಲಿಯೇ ತಿಳುವಳ್ಳಿಯ ನಾಡಿಗೇರ ಬಂಧುಗಳು ಸುಬ್ಬಣ್ಣ ಬಾಬಣ್ಣ ಎಂಬು ಹೆಸರು ಇದ್ದರು. ಅವರು ಊಟಕ್ಕೆ ಮಿತ್ರ ಸಮಾಜಕ್ಕೆ ಬರುತ್ತಿದ್ದರಂತೆ, ಒಂದು ಊಟಕ್ಕೆ ಕೇವಲ ನಾಲ್ಕಾಣೆ ಫುಲ್‌ಮೀಲ ದಿನವೂ ಭಕ್ಕರಿ ಮಾಡುತ್ತಿದ್ದರೂ ಉತ್ತಮ ಅಕ್ಕಿಯ ಅನ್ನ, ಉತ್ತಮ ತುಪ್ಪಲ್ಲಿ ಕೊಡುತ್ತಿದ್ದರಂತೆ ನಾಡಗೇರ ಬಂಧುಗಳಲ್ಲದೇ ದಿನ ನಿತ್ಯ ಊಟಕ್ಕೆ ಬರುವ ಕೆಲಜನರ ಸ್ನೇಹವೂ ಆಗಿತ್ತು. ಹೀಗಾಗಿ ಅವರೆಲ್ಲ ಸೇರಿದರೆ ಮೋಜಿನಿಂದ ಪೈಪೋಟಿಯಿಂದ ಊಟ ಮಾಡುತ್ತಿದ್ದರಂತೆ. ಭಕ್ಕರಿ ಒಡಿಯಲು ಶಿರಹಟ್ಟಿ ಕಡೆಯವರಿಬ್ಬರು ಅಣ್ಣತಮ್ಮಂದಿರಿದ್ದರು ಉತ್ತಮ ಭಕ್ಕರಿ ಮಾಡುತ್ತಿದ್ದರಂತೆ. ಕಡಕ ಭಕ್ಕರಿಯನ್ನಂತು ಬಹು ಶ್ರೇಷ್ಠವಾಗಿ ಮಾಡುತ್ತಿದ್ದರು. ಬಿಸಿ ಭಕ್ಕರಿಕೂಡ ಉತ್ಕೃಷ್ಟ ಬಿಸಿ ಭಕ್ಕರಿ ಮೇಲೆ ತುಪ್ಪ, ಗುರಳ್ಳ ಹಿಂಡಿ ಹಾಕಿ ಸವರಿಕೊಂಡು ತಿನ್ನುವುದೇ ಒಂದೇ ಸೊಗಸು ಎಂದು ನೆನಸಿಕೊಳ್ಳುತ್ತಿರುತ್ತಿದ್ದರು. ಈ ರೀತಿಯಾಗಿ ಹೈಸ್ಕೂಲು ದಿನಗಳು ಕಳೆಯುತ್ತಿದ್ದವಂತೆ. ಅಭ್ಯಾಸವೂ ಭರದಿಂದ ಸಾಗುತ್ತಿದ್ದ ಆ ವೇಳೆಯಲ್ಲಿ ಸ್ನೇಹಿತರು ಬೇರೆ ಬೇರೆ ಶಾಲೆಗಳಲ್ಲಿದ್ದರೂ ಸಾಯಂಕಾಲ ಒಂದೆಡೆ ಸೇರುತ್ತಿದ್ದರಂತೆ.

ಎನ್.ಸಿ. ದೇಸಾಯಿಯವರ ಕ್ಲಾಸಿನಲ್ಲಿ ಆರ್.ಹೆಚ್. ಸುಬ್ಬಣ್ಣನವರ ಸಿ.ಎಮ್. ಕುಲಕರ್ಣಿ, ದೇಸಾಯಿ ಹಳ್ಳಿಯ ಮಾಲಪ್ಪ, ಮಾಸ್ತರರ ಮಗ ಮತ್ತು ಅವರ ತಮ್ಮ ನೀಲಪ್ಪನವರು. ಒಬ್ಬ ಅಧ್ಯಾಪಕರಾಗಿದ್ದರು. ಆ ಶಾಲೆಯಲ್ಲಿ ಇವರ ಕ್ಲಾಸಿನ ಇನ್ನೂ ಕೆಲಗೆಳಯರಿದ್ದರು ಅವರ ರಾ.ಪಾ. ಶಿರೋಳ ಬಾಗಲ್ ಎಂಬುವವರೂ ಇದ್ದರು. ಶಿರೋಳರಿಗೆ ಸಾಹಿತ್ಯದ ಅಭಿರುಚಿ, ಕಾವ್ಯ ರಚಿಸುವ ಹವ್ಯಾಸ. ಅದರ ಪರಿಣಾಮವಾಗಿ "ಹಸಿಗಳ" (ಹಸಿ ಕವಿತೆಗಳು) ಎಂಬ ಒಂದು ಅತಿ ಚಿಕ್ಕ ಕಾವ್ಯ ಸಂಗ್ರಹ ಬರೆದಿದ್ದರು. ಅದನ್ನು ಆನಂದವನದಲ್ಲಿ ಛಪ ಕಾಳೆಯವರ ಛಾಪಾಕಾಗದದಲ್ಲಿ ಮುದ್ರಿಸಿ ಕೊಟ್ಟಿದ್ದು ಹತ್ತೇ ರೂಪಾಯಿಗಳಿಗೆ ಒಂದು ಸಾವಿರ ಪ್ರತಿಗಳನ್ನು ಅಚ್ಚು ಹಾಕಿಕೊಟ್ಟಿದ್ದರು. "ಹುಡುಗರು ಏನೋ ಉತ್ಸಾಹದಿಂದ ಮಾಡಿದ್ದಾರೆ" ಪ್ರೋತ್ಸಾಹಿಸುವ ಉದ್ದೇಶದಿಂದ ಅಚ್ಚು ಹಾಕಿಕೊಟ್ಟರಂತೆ. ಇದೇ ಸಮಯದಲ್ಲಿ ಆ ಶಾಲೆಯಲ್ಲಿ

"ಐರ್ಝಾಕ್" ಎಂಬ ಡ್ರಾಯಿಂಗ್ ಮಾಸ್ತರ ಇದ್ದರಂತೆ ಅವರು ಎನ್.ಸಿ. ದೇಸಾಯಿಯವರೆಗೆ ಡ್ರಾಯಿಂಗ್ ಪರೀಕ್ಷೆಗೆ ಕಟ್ಟೆಂದು ಒತ್ತಾಯಿಸುತ್ತಿದ್ದರಂತೆ. Intermediati ಪರೀಕ್ಷೆಯಲ್ಲಿ ಎನ್.ಸಿ. ದೇಸಾಯಿಯವರೆಗೆ ಪ್ರಾವಿನ್ಸ್‌ನಲ್ಲಿ ಮೆಮರಿ ಡ್ರಾಯಿಂಗ್‌ನಲ್ಲಿ ಪಾರಿತೋಷಕ ಪಡೆದರಂತೆ. ಆ ಸಂದರ್ಭದಲ್ಲಿ ಶಾಲೆಯವರು (**ಹೆಚ್ಚಾಗಿ** ಪ್ರಿನ್ಸಿಪಾಲರಾಗಿದ್ದ ಶ್ರೀ ಬೆಂಗೇರಿಯವರು) ಒಂದು ಸಭೆಯನ್ನು ಏರ್ಪಡಿಸಿ ಶಿಕ್ಷಣ ಖಾತೆಯಲ್ಲಿ ದೊಡ್ಡ ಅಧಿಕಾರಿಯಾಗಿದ್ದ ಶ್ರೀ ಬೆಟಗೇರಿಯವರನ್ನು ಮುಖ್ಯ ಅತಿಥಿಗಳೆಂದು ಕರೆದಿದ್ದರು. ಇದು ಎನ್.ಸಿ. ದೇಸಾಯಿಯವರಿಗೆ ಮೊದಲ ಸತ್ಕಾರವಾಗಿತ್ತು. ಈ ರೀತಿಯಾಗಿ ದಿನಗಳು ಉರುಳುತ್ತಿದ್ದವು.

**ರಾಷ್ಟ್ರೀಯ ಆಂದೋಲನ**

ಕ್ರಿ.ಶ. ೧೯೪೨ನೇ ವರ್ಷ ಕಾಲಿರಿಸಿತು. ಭಾರತದ ಸ್ವಾತಂತ್ರ್ಯದ ಇತಿಹಾಸದಲ್ಲಿ ೧೯೪೨ ಬಹು ಮಹತ್ವದ ವರ್ಷ. ಆ ವರ್ಷ ರಾಷ್ಟ್ರೀಯ ಕಾಂಗ್ರೆಸ್ ಮುಖಂಡರು ಬ್ರಿಟಿಷರಿಗೆ "ಭಾರತದಿಂದ ತೊಲಗಿರಿ" ಎಂದು ಅವರಿಗೂ ದೇಶಭಕ್ತರಿಗೆ "ಮಾಡು ಇಲ್ಲವೇ ಮಡಿ" ಎಂದು ಇದು ಕೊನೆಯ ಆದೇಶವೇನೊ ಎಂಬ ರೀತಿಯಲ್ಲಿ ಕಟ್ಟುನಿಟ್ಟಾಗಿ ಸಾರುತ್ತಿತ್ತು. ಈ ನಿರ್ಣಯವನ್ನು ಮುಂಬಯಿ ಗೋವಾಲಿಯಾ ಟ್ಯಾಂಕಿನಲ್ಲಿ ನಡೆದ ಸಭೆಯಲ್ಲಿ ತೆಗೆದುಕೊಂಡಿತು. ಆ ನಿರ್ಣಯದಿಂದಲೂ ಭಾರತೀಯ ಜನತೆಯಲ್ಲಿ ಆಗಿದ್ದ ಜಾಗೃತಿಯ ಕಾರಣದಿಂದಲೂ ಎದುರಿಸಬೇಕಾಗಿದ್ದ ಚಳುವಳಿಯ ಅತಿ ಹುರುಪಿನಿಂದಲೇ ಎದುರಿಸುವುದೆಂದು ಜನತೆ ಸಿದ್ಧರಾಗಿದ್ದರಲ್ಲದೇ ಕಂಕಣಬದ್ಧರಾಗಿದ್ದರು.

ಜನತೆಯು ಈ ಚಟುವಟಿಕೆ ನಿರ್ಣಯಗಳನ್ನು ಅವಲೋಕಿಸಿದ ಬ್ರಿಟಿಷ್ ಸರಕಾರ ಕೂಡ ಅಷ್ಟೇ ಎಚ್ಚರ ತೆಗೆದುಕೊಂಡಿತಂತೆ. ಸೈನ್ಯವನ್ನು ಕೂಡ ಸಜ್ಜುಗೊಳಿಸಿತ್ತು. ಸಂಶಯ ಬಂದವರನ್ನು ಅಂದರೆ ಚಳುವಳಿಯಲ್ಲಿ ಭಾಗವಹಿಸಿದರು. ಸಂಶಯ ಬಂದರೆ ಸಾಕು ಅಂಥವರನ್ನು ನ್ಯಾಯಾಲಯದ ಆದೇಶ ಕೂಡ ಇಲ್ಲದೆ ಬಂದೀಖಾನೆಗೆ ಸೇರಿಸಲು ಮುಕ್ತ ಅಧಿಕಾರವನ್ನು ಪೊಲೀಸ್ ಇನ್ಸ್‌ಪೆಕ್ಟರರಿಗೆ ನೀಡಿತು. ಅಂದರೆ ಅವರು ಯಾರು ಬೇಕು ಅವರನ್ನು ಬಂದೀಖಾನೆಗೆ ಕಳಿಸಬಹುದು. ಈ ಕಾಯಿದೆಯ ದುರುಪಯೋಗವೂ ನಡೆಯುತ್ತಿತ್ತಂತೆ.

ರಾಷ್ಟ್ರೀಯ ಮುಖಂಡರನ್ನು ಗೋವಾಲಯ ಟ್ಯಾಂಕಿನಲ್ಲಿ ಬಂಧಿಸಿದ್ದು ೧೯೪೨ರ ಆಗಸ್ಟ್ ೭ರಂದು ಸಭೆ ನಡೆದಾಗಲೇ ಬಂಧಿಸಿದ್ದರ ಬಂಧನದ ಸುದ್ದಿ ಕ್ಷಣಾರ್ಧದಲ್ಲಿ ದೇಶದ ಮೂಲೆ ಮೂಲೆಗೂ ಪಸರಿಸಿತು: ಸುದ್ದಿ ತಿಳಿಯುವುದೇ ತಡ ಎಲ್ಲೆಲ್ಲೂ ಗೊಂದಲ ಸರಕಾರದ ಕಾರ್ಯಗಳಿಗೆ ತೊಂದರೆ ಉಂಟು ಮಾಡುವುದು ಕೂಡ ಮುಖಂಡರ ಆದೇಶವಾಗಿತ್ತು.

ವಿದ್ಯಾರ್ಥಿಗಳೂ ತಮಗೆ ತಿಳಿದ ರೀತಿಯಿಲ್ಲ, ತಮ್ಮ ಯೋಗ್ಯತೆಗೆ ತಕ್ಕಂತೆ ಈ ಅಸಹಕಾರ ಚಳುವಳಿಯಲ್ಲಿ ಧುಮುಕಲು ಸಾಧ್ಯ. ರಾಷ್ಟ್ರೀಯ ಮುಂದಾಳುಗಳ ಕರೆಯೂ ಹಾಗೇ ಇತ್ತು. ಮಹಿಳೆಯರು,

ಮುದುಕರು, ಮಕ್ಕಳು, ಎಲ್ಲರೂ ಭಾಗವಹಿಸಬಹುದಿತ್ತು. ಏನೇ ಆದರೂ ಈ ಸಲದ ಚಳುವಳಿಯು ಸ್ವಾತಂತ್ರ್ಯ ಗಳಿಸುವುದೆಂಬ ಛಲ, ಆ ಉದ್ದೇಶ ದೇಶದ ಎಲ್ಲರನ್ನೂ ಜಾಗೃತಗೊಳಿಸಿತ್ತು. ಗಾಂಧೀಜಿಯವರ ಅಹಿಂಸಾ ತತ್ವವೇನೋ ಇದ್ದಿತು. ಅದನ್ನು ಮೀರಿಯೂ ಹೋಗಲಿಲ್ಲ. ಸರಕಾರದೊಂದಿಗೆ ಅಸಹಕಾರವನ್ನು ಮುಂದಿಟ್ಟು ಸರಕಾರದ ಆಡಳಿತಕ್ಕೆ ತೊಂದರೆ ಕೊಡುವುದೇ ಮುಖ್ಯ ಉದ್ದೇಶವಾಗಿತ್ತು. ರಾಜಮಾರ್ಗದಲ್ಲಿಯ ಸೇತುವೆ ಧ್ವಂಸ ಮಾಡಿದರೆ ಸೈನ್ಯಕ್ಕಾಗಲೀ, ಪೋಲೀಸರಿಗಾಗಲೀ, ಚಲನವಲನಕ್ಕೆ (ಗಳಿಯಂತಾಗಿತ್ತು.) ಟೆಲಿಫೋನ್ ತಂತಿ ಕಡಿದು ಹಾಕುವುದರಿಂದ ಸಂಪರ್ಕ ತೊಂದರೆಯಾಗಬೇಕು ಎಂಬುದು ಮುಖ್ಯ ಉದ್ದೇಶವಾಗಿತ್ತು. ವಸೂಲು ಮಾಡಿದ ಹಪ್ತ ಲೂಟಿ, ಅಂಚೆ ಕಚೇರಿಗಳಿಗೆ ಬೆಂಕಿ ಹಚ್ಚುವುದು, ಶಾಲಾ ಕಟ್ಟಡಗಳು, ಸರಕಾರಿ ಕಚೇರಿಗಳ ಧ್ವಂಸ, ವಾಹನಗಳ ನಾಶ, ಇಂಥ ಅನೇಕ ಕಾರ್ಯಗಳನ್ನು ಮುಖಂಡರು ಸಾರಿದರು. ಆ ಕಾರ್ಯಗಳಲ್ಲಿ ವಯಸ್ಸಿನ ನಿರ್ಬಂಧವಿಲ್ಲದೇ ಹೆಣ್ಣುಗಂಡು ಭಾಗವಹಿಸುವ ಅನುಕೂಲತೆ ಇತ್ತು. ಆದರೆ ಇಂಥ ಘಟನೆಗಳನ್ನು ವರ್ತಮಾನ ಪತ್ರಗಳು ಪ್ರಕಟಿಸಿ ಸಾರುವಂತಿರಲಿಲ್ಲ. ಆದರೆ ಚಳುವಳಿಗಾರರಿಗೆ ಈ ಸುದ್ದಿ ಮುಟ್ಟುವುದು ಅವಶ್ಯಕವೂ ಇತ್ತು. ಅಂತಹ ಪ್ರಸಂಗಗಳು ಗುಪ್ತ ಸ್ಥಳಗಳಲ್ಲಿ ಅನುಕೂಲವಿದ್ದ ಮಾಧ್ಯಮದಿಂದ ಪ್ರತಿಗಳನ್ನು ಅಚ್ಚುಹಾಕಿ ಗುಪ್ತ ರೀತಿಯಲ್ಲೇ ಸಾರ್ವಜನಿಕರಿಗೆ ತಲುಪಿಸಬೇಕು. ಇಂಥ ಕಾರ್ಯಗಳಲ್ಲಿ ವಿದ್ಯಾರ್ಥಿಗಳ ಕಾರ್ಯ ಹಿರಿದಾಗಿತ್ತು. ಅಲ್ಲದೆ ಕೆಲ ಹಿರಿಯ ಮುಖಂಡರು ವೇಷ ಬದಲಾಯಿಸಿ ಊರೂರು ಅಲೆದು ಜನ ಜಾಗೃತಿಯನ್ನು ಮಾಡುತ್ತಿದ್ದರು. ಅಂಥವರಿಗೆ ಆಶ್ರಯ ನೀಡಲು ಅವರಿಗೆ ಊಟ, ಉಡುಗೆ ನೋಡಲು ಬೇರೊಂದು ಪಡೆಯು ನಿರ್ಮಾಣವಾಗಿತ್ತು. ಅಂತೂ ತಿಕ್ಕಾಟದ ಜೀವನ ಪ್ರಾರಂಭವಾಗಿ ಸಾಮಾನ್ಯ ಜನಜೀವನದಲ್ಲಿ ವ್ಯತ್ಯಾಸ ತಲೆದೋರಿತ್ತು.

ಮತ್ತೊಮ್ಮೆ ಎಸ್.ಸಿ. ದೇಸಾಯಿಯವರ ಶಿಕ್ಷಣಕ್ಕೆ ತೊಡಕು. ಹೇಗೋ ತಂದೆಯವರ ಮನವೊಲಿಸಿ ಅವರೊಬ್ಬ ಹೈಸ್ಕೂಲು ವಿದ್ಯಾರ್ಥಿಯಾಗಿದ್ದು, ಸಿ.ಟಿ. ಹೈಸ್ಕೂಲ್‌ನಲ್ಲಿ ಶಿಕ್ಷಣ ಮುಂದುವರೆದಿತ್ತು.

**ಚಳುವಳಿ**

೧೯೪೨ ಆಗಸ್ಟ್ ೯ರಂದು ಎಂದಿನಂತೆ ಶಾಲೆಗೆ ಹೋದರಂತೆ. ಹೆಚ್ಚಾದ ಹುಡುಗರು ಖಿನ್ನ ಮುಖರಾಗಿ ಹೊರಗೇ ನಿಂತಿದ್ದರು. ಅಧ್ಯಾಪಕರು ಕೂಡ ನಿರ್ಜೀವ ಕಳೆಯಿಂದ ಕೈ ಕಟ್ಟಿಕೊಂಡು ಮೌನಧರಿಸಿ ನಿಂತಿದ್ದರಂತೆ. ಯಾರೂ ಮಾತಿಲ್ಲ, ಕತೆಯಿಲ್ಲ ಏನು ಮಾಡಬೇಕೆಂದು ತಿಳಿಯದೆ ದಿಗ್ಮೂಢರಂತೆ ನಿಂತಿದ್ದರಂತೆ ಒಬ್ಬರ ಮುಖದ ಮೇಲೂ ಚೈತನ್ಯವೇ ಇರಲಿಲ್ಲ.

ಈ ವಾತಾವರಣ ಎಸ್.ಸಿ. ದೇಸಾಯಿಯವರನ್ನು ದಿಗ್ಮೂಢನನ್ನಾಗಿಯೇ ಮಾರ್ಪಡಿಸಿತಂತೆ. ಆಗ ಅವರ ಜೊತೆ ಕೆಲ ಸಹಪಾಠಿಗಳು ಇದ್ದರು. ಅವರು ಕೂಡಸ್ತಬ್ಧ, ಇವರಿಗೆ ತೀರ ಹತ್ತಿರದಲ್ಲಿದ್ದರೆಂದರೆ ಶ್ರೀರಾಮಚಂದ್ರ ಜಂತಲಿ. ಇವರು ಮತ್ತು ಜಂತಲಿ ಒಬ್ಬೊಬ್ಬರೂ ಮುಖ ನೋಡಿಕೊಂಡು ಜಂತಲಿಯವರೇ ಮೊದಲು ಬಾಯಿ ಬಿಟ್ಟು "ನಡಿರಿ ದೇಸಾಯರೇ ಕ್ಲಾಸಿಗಂತೂ ಹೋಗೋಣ" ಎಂದರಂತೆ. ಆಗ ಅವರ

ಕ್ಲಾಸು ಇದ್ದುದ್ದು ಕೊನೆಯ ಅಂತಸ್ತಿನ ಮೇಲೆ. ಕ್ಲಾಸು ಪ್ರವೇಶಿಸಿದರೆ ಕೆಲ ವಿದ್ಯಾರ್ಥಿಗಳು ನೋಡುತ್ತಾ ಇದ್ದರು, ಆದರೆ ಯಾರೂ ಮಾತಾಡುತ್ತಿಲ್ಲವಂತೆ. ಡೆಸ್ಕ್ ಮೇಲೆ ಕೈ ವೂರಿ ಗಲ್ಲಕ್ಕೆ ಕೈ ಹಚ್ಚಿ ಕುಳಿತಿದ್ದರು. ಅಧ್ಯಾಪಕರೂ ಅಲ್ಲಿದ್ದು... "ಆ ಕಪ್ಪು ಹಲಗೆ ಮಾತ್ರ ಬಹು ಜೋರಿನಿಂದ ಮಾತಾಡುತ್ತಿತ್ತು."

ನಿಮ್ಮ ರಾಷ್ಟ್ರ ನಾಯಕರನ್ನೆಲ್ಲ 'ದೇಶ ಬಿಟ್ಟು ತೊಲಗಿರಿ' ಎಂಬ ಘೋಷಣೆ ಮಾಡುವುದಕ್ಕೆ ಕೆಲವೇ ನಿಮಿಷ ಮುಂಚಿತವಾಗಿ ಅವರನ್ನೆಲ್ಲಾ ಬಂಧಿಖಾನೆಗೆ ಹಾಕಿದ್ದಾರೆ" ಎಂದು ಬರೆದು. ಗಾಂಧಿ, ನೆಹರು, ಪಟೇಲ್, ಅಬ್ದುಲ್ ಕಲಾಂ ಅಜಾದ್, ಮುಂತಾದವರ ಜಯ ಘೋಷಣೆ ಸಾಗಿತ್ತು. ಆ ಕಪ್ಪು ಹಲಿಗೆ ಎಂಥೆ. ಶಿಕ್ಷಕರಿಗೂ ಕೂಡ ಗೊತ್ತಿರಲಿಲ್ಲ. ಅದನ್ನು ಯಾರು ಬರೆದಿದ್ದರಂತೆ. ಆದರ ಅದನ್ನು ಯಾರೂ ಅಳುಕಿಸಲು ಹೋಗಿರಲಿಲ್ಲ! ಆದರೆ ಆ ಬರಹ ಸಾವಿರಾರು ಜನ ಕೂಡಿ ಒಟ್ಟಿಗೇ ಕೂಗಿದರೆ, ಯಾವ ರೀತಿಯ ಧ್ವನಿ ಬರಬೇಕು. ಆ ಗರ್ಜನೆಯನ್ನು ಹೊರಡಿಸಿತು. ಆ ಹಲಿಗೆ ಸಿರಿ, ಎನ್.ಸಿ. ದೇಸಾಯಿಯವರು ಮತ್ತೊಮ್ಮೆ ಜಂತಲಿ ಕಡೆ ನೋಡಿದರೆ ಅವರು ಮಾತನಾಡಲಿಲ್ಲ. ಆದರೆ ಕೆಳಗಿಳಿಯುವ ಸಂಜ್ಞೆ ಮಾಡಿದರು. ಎನ್.ಸಿ. ದೇಸಾಯಿಯರು ಉಳಿದ ಹುಡುಗರಿಗೆ ನಡೆಯಿರಿ ಹೋಗೋಣ ಎಂಬಂತೆ ಕೈಮಾಡಿದರಂತೆ... ಇದುವರೆಗೆ ಸೌಮ್ಯವಾಗಿದ್ದ ಆ ವಿದ್ಯಾರ್ಥಿಗಳಿಗೆ ಆ ಕಿರುಚುವ ಧ್ವನಿ ಎಲ್ಲಿಂದ ಬಂತೊ ಮುಖಂಡರ ಜಯಘೋಷ "ಭಾರತ ಮಾತಾಕಿ ಜೈ" ಎಂಬುವುದರೊಂದಿಗೆ ಮಂಗಗಳಿರಾ? "ನಮ್ಮ ದೇಶವನ್ನು ಬಿಟ್ಟು ತೊಲಗಿ" ಇದು ನಮ್ಮ ನೆಲ, ನಮ್ಮ ಜನ, ಪರಕೀಯ ಆಡಳಿತವನ್ನು ನಾವು ಸಹಿಸಲಾರೆವು ತೊಲಗಿ "Quit India" ಎಂದು ಮುಂತಾಗಿ ಜೋರಿನಿಂದ ಕೂಗುತ್ತ ಕೆಳಗಿಳಿದರು, ಇಳಿಯುತ್ತ ಹೋದರೆ ಎದುರಿಗೆ ಹಾಜರಿದ್ದ ಅಧ್ಯಾಪಕರಾಗಲಿ ಸಿಬ್ಬಂಧಿಯಾಗಲೀ ಹೀಗೆ ಹೊರಟ ವಿದ್ಯಾರ್ಥಿಗಳನ್ನು "ನೀವ್ಯಾಕೆ ಹೋಗುತ್ತಿದ್ದೀರಿ ಏನು ಸಮಾಚಾರ" ಎಂದು ಯಾರೂ ಕೇಳಲಿಲ್ಲ. ನೆಲಮಾಳಿಗೆಗೆ ಬರುವ ಹೊತ್ತಿಗೆ ವಿದ್ಯಾರ್ಥಿಗಳ ದೊಡ್ಡ ಸಮೂಹವೇ ಆಗಿತ್ತು. ಅಂದು ಶಾಲೆಯಲ್ಲಿ ಹಾಜರಿದ್ದ ಯಾವ ವಿದ್ಯಾರ್ಥಿಯೂ ಈ ಪ್ರಸಂಗದ ನಂತರ ಮನೆಗೆ ತೆರಳಿರಲಿಲ್ಲ.

ಈ ವಿದ್ಯಾರ್ಥಿಗಳು ರಸ್ತೆಗೆ ಬರುವ ಹೊತ್ತಿಗೆ, ಅದರಲ್ಲಿ ಒಂದು ಮಾನಸಿಕ ಜಾಗೃತಿಯೇ ಹುಟ್ಟಬೇಕು, ರಾಷ್ಟ್ರೀಯ ಘೋಷಣೆಯ ಧ್ವನಿ ಆಕಾಶಕ್ಕೇ ತಲುಪಿತ್ತೋ ಎನ್ನುವುದು ಜೋರಾಗಿತ್ತು. ಎಷ್ಟೋ ವಿದ್ಯಾರ್ಥಿಗಳ ಕೈಗೆ ರಾಷ್ಟ್ರಧ್ವಜ ಅಲಂಕರಿಸಿತು. ಈ ಸಮಯದಲ್ಲಿ ಎನ್.ಸಿ. ದೇಸಾಯಿಯರು ಮತ್ತು ಅವರ ಗೆಳೆಯ ಜಂತಲಿಯ ಪಳು ದೃಷ್ಟಿ ಒಂದಾದವು. "ನಡೀರಿ ಹೋಗೋಣ" ನ್ಯೂ ಇಂಗ್ಲಿಷ್ ಸ್ಕೂಲ್ ಕಡೆಗೆ ಕೈ ಮಾಡಿದರು ಜಂತಲಿ, ಆಗ ಈ ವಿದ್ಯಾರ್ಥಿಗಳ ಸಮೂಹ ಮೆರವಣಿಗೆಯ ರೂಪ ತಾಳಿತು. ಈ ಸಮಯಕಾರರು ಮೆರವಣಿಗೆಯ ಮುಂದುಗಡೆ ಎನ್.ಸಿ. ದೇಸಾಯಿಯರಂತೆ ಮತ್ತು ಅವರ ಸ್ನೇಹಿತ ಜಂತಲಿಂಯೇ ಇದ್ದರಂತೆ.

ನ್ಯೂ ಇಂಗ್ಲಿಷ್ ಸ್ಕೂಲ್‌ಕಡೆ ಮೆರವಣಿಗೆಯ ಮುಖ ಮಾಡಿ ಹೊರಟರು. ಕೆಲವೇ ಅಂತರದಲ್ಲಿ ಸಾರ್ವಜನಿಕರೂ ಮೆರವಣಿಗೆಯಲ್ಲಿ ಸೇರತೊಡಗಿದರಂತೆ. ಈ ಹೊತ್ತಿಗೆ ಮೆರವಣಿಗೆ ಬೃಹದಾಕಾರವಾಗಿತ್ತು.

ಘೋಷಣೆ ಇನ್ನೂ ಜೋರಾಗಿತ್ತು. ರಾಷ್ಟ್ರಧ್ವಜಗಳು ಮೆರವಣಿಗೆಯಲ್ಲಿದ್ದ ಪ್ರತಿಯೊಬ್ಬನ ಕೈಗೂ ಬಂದಿತ್ತು. ಆಗ ಹುಬ್ಬಳ್ಳಿಯಲ್ಲಿ ಕನ್ನಡ ೨ನೇ ನಂಬರ್ ಶಾಲೆ ಆಗ ಹುಬ್ಬಳ್ಳಿಯಲ್ಲಿ ಬಹುದೊಡ್ಡ ಶಾಲೆ ವಿದ್ಯಾರ್ಥಿಗಳ ಸಂಖ್ಯೆಯೂ ಜಾಸ್ತಿ. ಈ ಮೆರವಣಿಗೆ ಅಲ್ಲಿ ಹೊರಟು ದಾರಿಯಲ್ಲಿ ಸಣ್ಣಪುಟ್ಟ ಶಾಲೆಯ ವಿದ್ಯಾರ್ಥಿಗಳು ಇದರಲ್ಲಿ ಸೇರಿಕೊಂಡವು. ೨ನೇ ನಂಬರ್ ಶಾಲೆ ಸೇರುವ ಹೊತ್ತಿಗೆ ಮಧ್ಯಾಹ್ನವಾಯಿತು. ಈ ಮೆರವಣಿಗೆ ನೋಡುತ್ತಲೇ ವಿದ್ಯಾರ್ಥಿಗಳು ಬಂದು ಇದರಲ್ಲಿ ಸೇರುತ್ತಿದ್ದರು. ಅವರಿಗೆ ಯಾರ ಆಮಂತ್ರಣವೂ ಬೇಕಿರಲಿಲ್ಲ. ಅಲ್ಲಿ ಅವರಿಗೆ ಯಾರಿಂದಲೂ ಆತಂಕವಾಗುತ್ತಿರಲಿಲ್ಲ. ೨ನೇ ನಂಬರಿನ ಶಾಲೆಯ ನಂತರ ಜನ ಸಮೂಹ ತೀರ ದೊಡ್ಡದಾಯಿತು. ನಾಗರಿಕರ ಸಂಖ್ಯೆಯಾಗಿ ಸಾಕಷ್ಟು ಬೆಳೆದಿತ್ತು ಘೋಷಣೆಯ ಚಿತ್ಕಾರ ಇಂಗ್ಲೆಂಡನ್ನೇ ಮುಟ್ಟಿತ್ತೋ ಏನೋ ಮೆರವಣಿಗೆ ಎಷ್ಟು ದೊಡ್ಡದಿತ್ತೆಂದರೆ ಪ್ರಾರಂಭದ ಎಳೆ ಕನ್ನಡ ಎರಡನೇ ನಂಬರ್ ಶಾಲೆಯ ಹತ್ತಿರವಿದ್ದಾಗ ಇನ್ನೊಂದು ಕೊನೆ ಕೊಪ್ಪಿಕರ ರೋಡ್ ಕೊನೆಯಲ್ಲಿತ್ತು. ಅಂದರೆ ಲ್ಯಾಮಿಂಗ್ಟನ್ ಹೈಸ್ಕೂಲ ತಲುಪಿತು. ಈ ಮೆರವಣಿಗೆಯ ಮುಂದಿನ ಉದ್ದೇಶ ಲ್ಯಾಮಿಂಗ್ಟನ್ ಹೈಸ್ಕೂಲಿನ ವಿದ್ಯಾರ್ಥಿಗಳನ್ನು ತಮ್ಮಲ್ಲಿ ಸೇರಿಸಿಕೊಳ್ಳುವುದೇ ಇತ್ತು. ಆದರೆ ಹಿಂದಿನ ಶಾಲೆಗಳಲ್ಲಿ ಸಿಕ್ಕ ಸಹಕಾರ ಇಲ್ಲಿ ಮಾಯವಾಗಿತ್ತು. ಅಲ್ಲದೆ ಮೆರವಣಿಗೆಯನ್ನು ಗೇಟಿನ ಒಳಗಡೆ ಬಿಡಕೂಡದೆಂಬ ಪ್ರತಿಭಟನೆಯೂ ಭದ್ರವಾಗಿತ್ತು. ಗೇಟು ಬಾಗಿಲುಬಂದ ಮಾಡಿ ಉದ್ದಕ್ಕೂ ಪೊಲೀಸರ ಕಾವಲು.

ಈ ಶಾಲೆ ಸರಕಾರಿ ಶಾಲೆ ಎಂದರೆ ಮುನಿಸಿಪಾಲ್ ಕಾರ್ಪೋರೇಶನ್‌ನಿಂದ ನಡೆಯುತ್ತಿದ್ದ ಈ ಶಾಲೆಯ ವಿದ್ಯಾರ್ಥಿಗಳು ಚಳುವಳಿಯಲ್ಲಿ ಭಾಗವಹಿಸಿದರು. ಸರಕಾರಕ್ಕೂ ಶಾಲಾ ಆಡಳಿತಕ್ಕೂ ಅಪಮಾನಕಾರ ಎಂಬುದು ಅವರ ಭಾವನೆಯಾಗಿತ್ತು. ಮೇಲಾಗಿ ಬ್ರಿಟಿಷರ ಬೆಂಬಲದಿಂದ ಈ ಶಾಲೆಯು ನಡೆಯುತ್ತಿತ್ತು. ಮತ್ತು ಖಾಸಗಿ ಪುಡೆ ಅದೊಂದು ಸ್ವಯಂ ಸೇವಕರ ದಳವೆಂದರೂ ಆದೀತು. ಆ ದಳದ ಕಮಾಂಡಂಟ್ ಈ ಶಾಲೆಯ ಡ್ರಿಲ್ ಮಾಸ್ಟರ್ ಆಗಿದ್ದು ಅವರ ಹೆಸರು ಗಿಣಿಮಾಮ ಎಂದು ಹೇಳುತ್ತಿದ್ದರಂತೆ. ಶಾಲೆ ಬಂದಾದರೆ ಅವರಿಗೂ ಅಪಮಾನ ಎಂದು ಅವರೂ ತಿಳಿದುಕೊಂಡಿದ್ದರೆಂದು ಕಾಣುತ್ತದೆ. ಪೂರ್ಣ ಪೊಲೀಸರ ಬೆಂಬಲ ಪಡೆದು ಎಲ್ಲ ಕ್ಲಾಸುಗಳಲ್ಲೂ ಮಕ್ಕಳನ್ನು ಒಳಗೇ ಕುಳ್ಳಿರಿಸಿ ಬಾಗಿಲು ಭದ್ರಪಡಿಸಿ ಸುತ್ತಲೂ ಪೊಲೀಸರ ಕಾವಲು ಇಟ್ಟಿದ್ದರು.

ಇವರಲ್ಲಿಯು ಕೆಲವರು ಶಾಂತ ರೀತಿಯಿಂದಲೇ ಮಕ್ಕಳನ್ನು ಹೊರಗೆ ಕಳುಹಿಸಿ, ಇದು ರಾಷ್ಟ್ರೀಯ ಆಂದೋಲನ ನೀವು ಹೀಗೆಯೇ ಹಟಹಿಡಿದು ಪ್ರತಿಭಟಿಸಿದರೆ, ನಿಮ್ಮದು ತಪ್ಪಾಗುತ್ತದೆ. ನೀವು ಕೂಡ ದೇಶ ದ್ರೋಹಿಗಳ ಪಟ್ಟಿಯಲ್ಲಿ ಸೇರುತ್ತೀರಿ ಎಂದು, ಕೂಡಿದ ಜನ ಪರಿಪರಿಯಿಂದ ಬೇಡಿಕೊಂಡರು ಯಾವ ಅಧ್ಯಾಪಕರೂ ಮಣಿಯಲಿಲ್ಲ. ಅದರ ಹಿನ್ನೆಲೆಯೆಂದರೆ ಡ್ರಿಲ್ ಮಾಸ್ಟರ್ ಗಿಣಿ ಎಂದು (ಸಿವಿಕ್ ಗಾರ್ಡ್ - ಕಮಾಂಡಂಟ್) ನೀವು ಹೆದರಬೇಡಿ ಬಂದ ಮೆರವಣಿಗೆ ಹಿಂದೆ ಕಳಿಸುವ ಜವಾಬ್ದಾರಿ ನನ್ನದು ಎಂಬ ಭರವಸೆ ನೀಡಿದ್ದನಂತೆ.

ಪೊಲೀಸರ ಪ್ರತಿಭಟನೆ ಅದಕ್ಕೆ ಅಧ್ಯಾಪಕರ (ಸಮ್ಮತಿ?) ಆದರೆ ಒಂದು ಮಾಡಿದ ಕಿಡಕಿಯ ಕಾಜಿನಿಂದ ಒಳಗಿದ್ದ ವಿದ್ಯಾರ್ಥಿ ವಿದ್ಯಾರ್ಥಿನಿಯರು ನಮ್ಮನ್ನು ಹೊರಗೆಳೆಯಿರಿ ಎಂಬ ನೋಟದಿಂದ ನೋಡುತ್ತಿದ್ದರಂತೆ. ಈ ದೃಶ್ಯದಿಂದ ಮೆರವಣಿಗೆಯಲ್ಲಿ ಬಂದಿದ್ದ ಜನರ ಎಲ್ಲೆ ವಾದ ಮಾಡತೊಡಗಿದರು. ಈ ವಾಗ್ವಾದ ನಡೆದೇ ಇತ್ತು. ಆ ಸಂದರ್ಭದಲ್ಲಿ ಹಿಂದಿನಿಂದ ಒಂದು ಕಲ್ಲು ತೂರಿಬಂತು ಬಂದಿದ್ದೆ ಒಂದು ಕಿಟಕಿಯ ಗಾಜು ಝಣ್ಣ ಎಂಬ ಶಬ್ದದೊಂದಿಗೆ ಪುಡಿ ಮಾಡಿತು. ಹೀಗೆ ಬಂದ ಕಲ್ಲು ಹಿಂದಿನಿಂದ ಸಾವಿರಾರು ಕಲ್ಲುಗಳನ್ನು ತರುವಂತಾಯಿತು. ಇನ್ನೇನು ಪೊಲೀಸರು ಗೋಲಿಬಾರು ಮಾಡಿ ಈ ಕೃತ್ಯವನ್ನು ನಿಲ್ಲಿಸಲು ಸಾಧ್ಯವಿತ್ತು. ಬಹುಶಃ ಇದು ಮಕ್ಕಳು ಸಾರಿದ ಆಂದೋಲನವಾಗಿದ್ದರಿಂದ ನಿಯಮದ ದೃಷ್ಟಿಯಿಂದ ಹಾಗೆ ಮಾಡಲು ಸಾಧ್ಯವಿರಲಿಲ್ಲವೆಂದು ಕಾಣುತ್ತಿತ್ತು.

ಪೊಲೀಸರು, ಆಡಳಿತ ವರ್ಗದವರು ನಿರುಪಾಯರಾಗಿ ಬಾಗಿಲುಗಳ ಕೀಲಿಗಳನ್ನು ತೆರೆದರು. ಹಾಗೆ ಮಾಡಿರದಿದ್ದರೆ ಪ್ರಸಂಗ ಇನ್ನೂ ವಿಕೋಪಕ್ಕೆ ಹೋಗಿ ಅನಾಹುತ ಆಗುವ ಸಂಭವದ ಚಿನ್ಹೆಗಳು ತಲೆದೋರಿದ್ದವು. ಬಾಗಿಲುಗಳನ್ನು ತರೆಯುವುದೇ ತಡ ತಾಸಾನು ತಾಸುಗಳು ಕ್ಲಾಸುಗಳಲ್ಲಿನ ಜೇಲಿನಲ್ಲಿದ್ದಂತಿದ್ದ ಮಕ್ಕಳು ಕೇಕೆ ಹೊಡೆಯುತ್ತ ಚೀರಾಡುತ್ತ ಹೊರನುಗ್ಗಿದವು. ಇನ್ನೊಂದು ಆಶ್ಚರ್ಯದಾಯಕವಾದ ವಿಷಯವೆಂದರೆ ಹೊರಬರುತ್ತಿದ್ದ ವಿದ್ಯಾರ್ಥಿಗಳು ಜೋರಾಗಿ ಮತ್ತು ಕೇಕೆಗಳೊಂದಿಗೆ ಜೈ ಜೈಕಾರ, ಭಾರತದ ಸ್ವಾತಂತ್ರ್ಯದ ಹೋರಾಟಕ್ಕೆ ಜಯವಾಗಲೀ ಎಂಬ ಘೋಷಣೆ, ರಾಷ್ಟ್ರನಾಯಕರ ಹೆಸರೆತ್ತಿ ಜಯ ಘೋಷಣೆ ಹೇಳಿದರು. ಈ ರೀತಿಯಾಗಿ ಮಕ್ಕಳ ಮನಸ್ಸಿನಲ್ಲಿ ಹುದುಗಿದ್ದ ದೇಶಪ್ರೇಮ, ರಾಷ್ಟ್ರ ಭಕ್ತಿ, ರಾಷ್ಟ್ರಪಿತರುಗಳ ಬಗ್ಗೆ ಇದ್ದ ಭಕ್ತಿ ಮುಂತಾದ ಉತ್ಸಾಹಗಳು ಸಹಜವಾಗಿ ಹೊರಹೊಮ್ಮಿದವು. ರಕ್ತಗತವಾಗಿ ಬೆಳೆದುಬಂದ ದೇಶಪ್ರೇಮ, ರಾಷ್ಟ್ರಭಕ್ತಿಗಳನ್ನು ಖೋಲಿಯಲ್ಲಿ ಇಟ್ಟು ಬಾಗಿಲಿಗೆ ಬೀಗ ಬಡಿದರೆ ಅದು ನಿಲ್ಲಲು ಸಾಧ್ಯವೆ?

ಈ ಪ್ರಸಂಗ ನಡೆಯುವ ಸಮಯಕ್ಕೆ ಬಹುಶಃ ಸಾಯಂಕಾಲದ ೫ ಗಂಟೆಯಾಗಿತ್ತು. ಎನ್.ಸಿ. ದೇಸಾಯಿ ಮತ್ತು ಅವರ ಮಿತ್ರ ಜಂತಲಿ. ಇದರಲ್ಲಿ ಪಾಲ್ಗೊಂಡು ಬಂದ ವಿದ್ಯಾರ್ಥಿಗಳು. ಹಾಗೂ ಇವರ ಜೊತೆ ಸಹಕಾರ ನೀಡಿದವರೊಡನೆ ಮೆರವಣಿಗೆಯಲ್ಲಿ ಭಾಗವಹಿಸಿದ ಸಾವಿರಾರು ನಾಗರಿಕರು, ಮಕ್ಕಳು, ಸಂತಸದಿಂದ ಹಾಗೂ ಘೋಷಣೆಯೊಂದಿಗೆ ಹೊರಬರುತ್ತಿರುವುದನ್ನು ಕಂಡು ಸಮಾಧಾನದ ಉಸಿರನ್ನು ಹೊರಹೊಮ್ಮಿಸಿದರು. ಕೊನೆಗೂ ಲ್ಯಾಮಿಂಗ್ಟನ್ ಹೈಸ್ಕೂಲನ್ನು ಒಂದುಗೊಳಿಸುವಲ್ಲಿ ಯಶಸ್ವಿ ಗಳಿಸಿದವೆಲ್ಲ ಎಂಬ ಸಮಾಧಾನದ ಉಸಿರೇ ಅದಾಗಿತ್ತು.

ಇದು ಎನ್.ಸಿ. ದೇಸಾಯಿಯವರ ಶಿಕ್ಷಣದ ಕೊನೆಯ ದಿನವೂ ಅಹುದು! ಮೆರವಣಿಗೆ ಮುಗಿಯಿತು ಜನ ತಮ್ಮ ತಮ್ಮ ಮನೆಗೆ ತೆರಳಿದರು. ಎನ್.ಸಿ. ದೇಸಾಯಿಯವರು ಕೂಡ ಮಿತ್ರ ಸಮಾಜಕ್ಕೆ ತಲುಪಿದರಂತೆ.

ಮೊದಲ ಮಾಳಿಗೆಯ ಮೇಲಿದ್ದ ಅವರ ರೂಮಿಗೆ ಹೋದರೆ ಕೀಲಿ ತೆಗೆದು ಬಾಗಿಲುಗಳು ತೆರೆದಿದ್ದಂತೆ, ಹೋಗುವಾಗ ಹಾಕಿದ್ದ ಕೀಲಿ ಈಗ ಹೇಗೆ ತೆರೆಯಿತು? ಎಂದು ಅನುಮಾನವಾಗಿ ರೂಮಿನಲ್ಲಿ ಇಣುಕಿದರೆ ಪಲ್ಲಂಗದ ಮೇಲೆ ಅವರ ತಂದೆಯವರು ಮಲಗಿದ್ದು ರೂಮಿನಲ್ಲಿದ್ದ ಸಾಮಾನುಗಳ ಬಟ್ಟೆಬರೆ ಪುಸ್ತಕಗಳು ಎಲ್ಲವನ್ನೂ ಔರಣವಾಗಿ ಕಟ್ಟಿಸಲಾಗಿತ್ತು. ರೂಮಿನ ಸುತ್ತಲ್ಲೂ ಮತ್ತೊಮ್ಮೆ ಕಣ್ಣಾಡಿಸಿದರಂತೆ ರೂಮನ್ನು ಖಾಲಿಮಾಡುವ ಉದ್ದೇಶದಿಂದಲೆ ಸಾಮಾನುಗಳನ್ನು ಕಟ್ಟಿಟ್ಟಂತೆ ಕಂಡುಬರುತ್ತಿತ್ತು. ಕೆಲನಿಮಿಷಗಳ ಕಳೆದ ನಂತರ ತಂದೆಯವರಿಗೆ ಎಚ್ಚರವಾಯಿತಂತೆ ಸಾವರಿಸಿಕೊಳ್ಳುತ್ತ ಎದ್ದು ಕುಳಿತು. ಸ್ವಲ್ಪ ಹೊತ್ತಾದ ಮೇಲೆ ಅವರ ತಂದೆಯವರಿಗೆ ಎಚ್ಚರವಾಗಿ ಅವರ ಮುಖ ನೋಡಿದರೆ ಗೊತ್ತಾಗುತ್ತಿತ್ತು. ಕೋಪದಿಂದಲೇ ಮಲಗಿದ್ದರು ಎಂಬುದು ಎದ್ದು ಕಾಣುತ್ತಿತ್ತು. "ಸಾಲೀನೂ ಬೇಡ ಮೂಲೀನೂ ಬೇಡ ಊರಿಗೆ ಹೋಗೋಣ ನಡಿ" ಈ ರೀತಿ ಚಳುವಳಿಯಲ್ಲಿ ಭಾಗವಹಿಸುವುದಾದರೆ ನಮ್ಮ ಆಸ್ತಿ ಗೌಡಕಿ, ಕುಲಕರ್ಣಿಕೆ ಎಲ್ಲವನ್ನೂ ಸರಕಾರ ಅವರಿಂದ ಕಸಿದುಕೊಂಡಿತು. ಕಲ್ಲಾಪೂರ ದೇಸಾಯರದು ಏನಾದರೂ ಎಂಬುದರ ಬಗ್ಗೆ ಗೊತ್ತಾಗದೆ ಇಲ್ಲ ಎಂದು ಗದರಿಸಿದರಂತೆ.

ದೇಶದ ಸ್ವಾತಂತ್ರ್ಯದ ಕಾಲ ಸಮೀಪಿಸಿದರು ಹಳೆ ತಲೆಮಾರಿನ ಜನಕ್ಕೆ ಭಾರತ ಸ್ವಾತಂತ್ರವಾಗುವುದೆಂಬ ಭರವಸೆ ಎಳ್ಳಷ್ಟೂ ಇರಲಿಲ್ಲವಂತೆ. ಅದಕ್ಕೆ ಕಾರಣವಿಲ್ಲದೇ ಇರಲಿಲ್ಲ. ಕಿತ್ತೂರು ಚನ್ನಮ್ಮ ನರಗುಂದ ಬಾಬಾಸಾಹೇಬ ಇಂಥ ಅನೇಕರ ಬ್ರಿಟಿಷರ ಮೇಲೆ ಕೈ ಎತ್ತಿ ಕೈ ಸುಟ್ಟುಕೊಂಡಿದ್ದರಂತೆ. ನರಗುಂದ ಬಾಬಾಸಾಹೇಬರು ಬ್ರಿಟಿಷರ ವಿರುದ್ಧ ಬಂಡೆದ್ದಾಗ ದೇಸಾಯಿ ಮನೆತನದ ಹಿರಿಯರು ಕೂಡ ಗುಪ್ತ ರೀತಿಯಲ್ಲಿ ಬಾಬಾಸಾಹೇಬರಿಗೆ ಸಹಾಯ ಮಾಡಿದ್ದರಂತೆ. ಆ ಸಂಶಯದ ಮೇಲೆ ಬ್ರಿಟಿಷರು ಅವರು ಊರ ಪಾಡೆದ ಝಡತಿ ಮಾಡಿದ್ದರಂತೆ "ಆ ಸಂದರ್ಭದಲ್ಲಿ ಇದ್ದು ಬಿದ್ದ ತುಬಾರ ಖಡ್ಗ ಬರ್ಚಿ ಮುಂತಾದವುಗಳನ್ನು ಬಾವಿಗೆ ಎಸೆದಿದ್ದರಂತೆ" ಎಂದು ಎಸ್.ಸಿ. ದೇಸಾಯಿಯವರ ಹಿರಿಯರು ಮಾತಾಡುವುದನ್ನು ಕೇಳಿದ್ದರು.

ಇಂಥ ಪ್ರಸಂಗ ಜೀವಂತ ಉದಾಹರಣೆಯೊಂದು ಇವರ ಕಣ್ಣೆದುರಿಗೆಯೇ ಇದ್ದುದು ಉಂಟು ಹಾನಗಲ್ಲ "ತಾಲೂಕಿನಲ್ಲಿ ಕಲ್ಲಾಪುರ ಎಂಬುದೊಂದು ದೇಸಗತಿಹಳ್ಳಿ, ಆ ದೇಸಾಯರು ರಾಷ್ಟ್ರೀಯ ಚಳುವಳಿಗೆ ಅಂದರೆ ಕಾಂಗ್ರೆಸ್ ಪಾರ್ಟಿ ಹಮ್ಮಿಕೊಂಡ ಕಾರ್ಯಗಳಿಗೆ ಸಹಾಯ ಮಾಡಿದ್ದರು" ಎಂದು ಅವರ ಆಸ್ತಿ ಅಷ್ಟೇ ಅಲ್ಲ. ದೇಸಿಗತಿಗೆ ಇರಬೇಕಾದ ಹಕ್ಕು ಬಾಧ್ಯತೆಗಳನ್ನು ಕೂಡ ರದ್ದು ಪಡಿಸಿದರು. ಈ ಹೆದರಿಕೆ ಬಹು ಜನರಲ್ಲಿ ಇದ್ದೇ ಇತ್ತು. ಹಾಗೆ ಹೆದರಿ ಓಂದೆ ಉಳಿದ ಜನಕ್ಕೆ ಬ್ರಿಟಿಷರು "ಭಾರತ ಬಿಟ್ಟು ತೊಲಗಲೂ" ಸಾಧ್ಯವಿಲ್ಲವೆಂಬ ನಂಬಿಗೆ ಕೂಡ ಅವರಲ್ಲಿ ಬೇರೂರಿತ್ತು. ಸಹಜವಾಗಿಯೇ ಈ ಭಾವನೆ ಎಸ್.ಸಿ. ದೇಸಾಯಿಯವರ ಮನೆತನದಲ್ಲೂ ಇತ್ತು.

ಸ್ವಲ್ಪ ಹೊತ್ತಾದ ಮೇಲೆ ಹೊರಡು ಗಾಡಿಗೆ ಹೋಗೋಣ ಎಂದು ಅವರ ತಂದೆಯವರು ಉಸಿರುವುದೇ ತಡ ಎಸ್.ಸಿ. ದೇಸಾಯಿಯವರು ಹೊರಟರಂತೆ. ವಿತ್ತ ಸಮಾಜದಿಂದ ಕೆಳಗಿಳಿದು ಬಂದು ಅಲ್ಲಿಂದ ಒಂದು

ಟಾಂಗಾದಲ್ಲಿ ರೈಲು ನಿಲ್ದಾಣಕ್ಕೆ ಬಂದರು. ಸಾಯಂಕಾಲ ಅರಸಿಕೆರೆ ಕಡೆಗೆ ಒಂದು ಗಾಡಿಯಿತ್ತು. ಅದರಲ್ಲಿ ಪ್ರವಾಸ ಮಾಡಿ ಹಾವೇರಿಗೆ ಬಂದು ಅಲ್ಲಿಂದ ಅಗಡಿ ತಲುಪಿದರಂತೆ. ಆಗಿನ್ನೂ ಆನಂದವನದ ಪಕ್ಕದಲ್ಲಿ ಇದ್ದ ಬಂಗಲೆಯಲ್ಲಿಯೇ ಇರುತ್ತಿದ್ದರು. ನೇರ ಅಲ್ಲಿಗೆ ಹೋದರು. ಶಾಲೆ ಕಲಿಯ ಬೇಕೆಂದ ಅವರ ಇಚ್ಛೆಗೆ ಪೂರ್ಣವಿರಾಮ ಸಿಕ್ಕಿತು.

ಆಗ ಮನೆಯಲ್ಲಿ ಬೇಸಾಯವೂ ಇತ್ತು ಬಂಗಲೆಯ ಸುತ್ತ ಮುತ್ತ ಇದ್ದ ಜಮೀನುಗಳನ್ನು ಸ್ವಂತ ಸಾಗುವಳಿ ಮಾಡುತ್ತಿದ್ದರು ಆಳಿನ ಜೊತೆ ಎನ್.ಸಿ.ದೇಸಾಯಿಯವರು ಹೊಲಕ್ಕೆ ಹೋಗುವದನ್ನೂ ರೂಡಿ ಮಾಡಿಕೊಂಡಿದ್ದರು ಚಿಕ್ಕಂದಿನಿಂದಲೂ ಬೆಳಿಗ್ಗೆ ಬೇಗ ಏಳುವ ಹವ್ಯಾಸ, ಎದ್ದ ಮೇಲೆ ಸುಮ್ಮನೆ ಕಾಲ ಕಳೆಯುತ್ತಿರಲಿಲ್ಲ ಏನಾದರೂ ಕೆಲಸದಲ್ಲಿ ತೊಡಗಿದ್ದರೇನೇ ತೃಪ್ತಿ. ಇವರು ಎದ್ದ ಸಮಯದಲ್ಲಿ ಆಳು ಬಂದಿರದಿದ್ದರೆ ಯಾವ ಸಂಕೋಚವಿಲ್ಲದೆ ಹೇಸಿಕೊಳ್ಳದೇ ನೇರ ದನದ ಕೊಟ್ಟಿಗೆಗೆ ಹೋಗಿ ಸಗಣಿ ಕಸ ತೆಗೆದು ಕೊಟ್ಟಿಗೆಯನ್ನು ಸ್ವಚ್ಛವಿಡುವಲ್ಲಿ ಇವರಿಗೆ ಸಮಾಧಾನವಾಗುತ್ತಿತ್ತು.

ಗಾಂಧಿ ತತ್ವಗಳು ಇವರ ಮೇಲೆ ಪರಿಣಾಮ ಬೀರಿದ್ದವು. ಇವರು ತಮ್ಮ ಬಟ್ಟೆಗಳನ್ನು ತಾವೆ ಒಗೆಯಲು ಇಷ್ಟ ಪಡುತ್ತಿದ್ದರು. ಇದಂತು ನಿಶ್ಚಯವಾಗಿಯೂ ಗಾಂಧೀಜಿ ಜೀವನದ ವ್ಯಕ್ತಿತ್ವದ ಪರಿಣಾಮ. ಆಳಿನ ಜೊತೆಗೆ ಹೊಲಕ್ಕೆ ಹೋದಾಗ ಆಳುಗಳು ಮೇಲೆ ಕಣ್ಣು ಇಟ್ಟು ನೋಡುವ ಕೆಲಸ ಇವರದಾಗಿತ್ತು. ಅವರನ್ನು ನೋಡುತ್ತ ಕಾಲಕಳೆಯುತ್ತಿರಲಿಲ್ಲ. ರಂಟೆ, ಕಂಟಿ ಹೊಡಯುವುದು ಅಲ್ಲಿ ಇರುವ ಉಪಕರಣಗಳನ್ನು ಎತ್ತಿಗೆ ನೇಗಿಲು ಕಟ್ಟಿ ಹೇಗೆ ಹೊಡಿಸುವದು ಅಲ್ಲಿ ಇರುವ ಉಪಕರಣಗಳನ್ನು ಎತ್ತಿಗೆ ನೇಗಿಲುಕಟ್ಟಿ ಹೇಗೆ ಹೊಡಿಸುವದು. ಎಂದೆಲ್ಲ ಕೆಲಸಗಳ್ಳಿ ಆಸಕ್ತಿಯಿಂದ ಭಾಗವಹಿಸಿ ಅವುಗಳ ತಂತ್ರವನ್ನು ಕಲಿತುಕೊಂಡರು ಹಾಗೂ ಹಳೇಕಾಲದಿಂದಲೇ ನಡೆದುಕೊಂಡು ಹಳೆಯ ತಂತ್ರಗಳನ್ನು ಸುಧಾರಿಸಲು ಸಾಧ್ಯವೇ? ಎಂದೂ ತಲೆ ಕೆಡಿಸಿಕೊಂಡವರಂತೆ ಬಿತ್ತುವುದು, ಎಡೆ ಹೊಡೆಯುವದು ಮುಂತಾದ ಕಾರ್ಯಗಳನ್ನು ಆಳುಗಳ ಜೊತೆಗೆ ಕೂಡಿಕೊಂಡು ಮಾಡುತ್ತಿದ್ದರು. ಇನ್ನು ವೇಳೆಯ ಅನುಕೂಲವಿದೆ ಸ್ವಲ್ಪ ಹೊತ್ತು. ಹೊರಗೆ ಹೋಗಬಹುದು ಎನಿಸಿದಾಗ ಆನಂದವನದ ಕಾರ್ಯಾಲಯದಲ್ಲಿ ಕುಳಿತು ಪತ್ರಿಕೆಗಳನ್ನು ಓದುವುದೇ ಅವರಿಗೆ ಅಭ್ಯಾಸವಾಗಿತ್ತು.

## ಮೆಟ್ರಿಕ್‌ಗೆ ಪ್ರಯತ್ನ

ಎನ್.ಸಿ.ದೇಸಾಯಿಯವರ ಅಗಡಿಯಿಂದ ೬ ಮೈಲಿ ದೂರದಲ್ಲಿ 'ಕರಜಗಿ' ಎಂಬುದೊಂದು ಊರು ಇದೆ. ಒಂದೆ ಅದೇ ತಾಲ್ಲೂಕು ಸ್ಥಳವಾಗಿತ್ತು. ಅಲ್ಲಿ ಒಬ್ಬ ಶಿಕ್ಷಕರಿದ್ದರು 'ರೊಟ್ಟಿ' ಎಂದು ಅವರ ಹೆಸರು ಆಚಾರ್ಯರು (ಭಾಗವತ ಪಂಥ) ಅವರ ಖಾಸಗಿಯಾಗಿ ಮನೆಯಲ್ಲೇ ಶಿಕ್ಷಣ ನೀಡಿ ಪರೀಕ್ಷೆಗೆ ಕೂಡಿಸುವ ವ್ಯವಸ್ಥೆ ಇಟ್ಟಿದ್ದರು. ಅವರನ್ನು ಕಂಡು ವಿವರಗಳನ್ನು ತಿಳಿದುಕೊಂಡು ಬಂದು ಆ ಸ್ಥಳ ಎನ್.ಸಿ.ದೇಸಾಯಿಯವರ ಊರಿನಿಂದ ಕೆಲವಿದ್ಯಾರ್ಥಿಗಳಲ್ಲಿ ಅಭ್ಯಾಸಕ್ಕೆ ಹೋಗುತ್ತಿದ್ದರು. ಅವರು ನಡದೇ ಹೋಗುವುದು ಬೇಡವಾಗಿತ್ತು. "ದೇಸಾಯಿಯವರ ಮಗನೂ ನಡೆದೇ ಹೋಗುತ್ತಾನೆ" ಎಂದು ಉಳಿದವರು ಡೀರೆಸಿಯಾರು ಎಂಬ

ಅಳುಕಿನಿಂದ ಒಂದು ಹಳೆಯ ಸೈಕಲನ್ನು (೩ ರೂ ಮೂರು ರೂಪಾಯಿಗೆ) ಕೇಳಿಕೊಂಡೂ ಆಗಿತ್ತು. ಅವರ ತಂದೆಯವರು ನಿರಾಶೆಗೊಳಿಸುವದಿಲ್ಲ ಎಂಬ ನಂಬಿಕೆಯಿಂದ ಕಳಿ ಹಿಟ್ಟಿದ್ದರು. ಅವರ ತಂದೆಯವರು ಕೂಡ ಇಲ್ಲ ಎನ್ನಲಿಲ್ಲ. ನಿಮ್ಮ ಕಾಕನ್ನ ಲಿಂಗನಗೌಡರು ಕೇಳು ಎಂದು ಹೇಳಿದರು. ಆಗ ಗೌಡಕಿ ಮಾಡಲು ಅವರನ್ನು ನೇಮಿಸಿದ್ದರು. ಅವರೆ ಖಾತೆದಾರರೇ ನೋಡಿಕೊಳ್ಳುತ್ತಿದ್ದರು ಆಗ ಲಿಂಗನಗೌಡ ಕಾಕಾ ಅವರನ್ನು ನೇಮಿಸಿದ್ದರು. ಗೌಡರೆ ಮಾಡುವವರಿಗೆ ಅಷ್ಟಿಷ್ಟು ಉತ್ಪನ್ನವಿರುತ್ತಿತ್ತು. ಆ ಹಿನ್ನೆಲೆಯಲ್ಲಿ ಅವರನ್ನು ಕಾಕಾ ಹತ್ತಿರ ಕಳಿಸಿದ್ದರು. ಅವರ ಕಾಕಾ "ಸಧ್ಯಕ್ಕೆ ನನ್ನ ಹತ್ತಿರ ಏನೂ ಇಲ್ಲ"ವೆಂದು ಸ್ಪಷ್ಟವಾಗಿ ಹೇಳಿದರಂತೆ. ಮತ್ತೊಂದು ಸರಿ ಇವರ ಆಶೆಯೂ ನಿರಾಶೆಯಲ್ಲಿ ಕೊನೆಗೊಂಡಿತು! ಈ ರೀತಿಯಾಗಿ ಕಾಲ ಉರುಳುತಿತ್ತು.

ಎನ್.ಸಿ.ದೇಸಾಯಿಯವರ ಮೊದಲನೆಯ ತಂಗಿ ಮೋಹನಾ ಬಾಯಿಯ ಮದುವೆಯು ಶಾಮರಾವ ಕುಲಕರ್ಣಿ ಜೊತೆ ನಡೆಯಿತು. ಅವರು ಸೊಲ್ಲಾಪುರಕ್ಕೆ ಹೋಗಬೇಕಾಯಿತು. ಮದುವೆಯ ನಂತರ ಅವರಿಬ್ಬರೇ ಹೇಗೆ ಹೋಗುವರು ಎಂದು ತಂಗಿಯ ಜೊತೆಗೆ ಇರಲಿ ಎಂದು ಇವರನ್ನೂ ಕರೆದುಕೊಂಡು ಹೋಗಿದ್ದರು. ಮೊದಲು ಮಂಗಳವಾರ ಪೇಟೆಯಲ್ಲಿ ಒಂದು ಚಿಕ್ಕಮನೆ ಬಾಡಿಗೆ ಹಿಡಿದಿದ್ದರು. ನಂತರ ಸರಕಾರಿ ಕ್ವಾಟ್ರಸ್ ಸಿಕ್ಕಿತು. ಎನ್.ಸಿ.ದೇಸಾಯಿಯವರು ಸೊಲ್ಲಾಪುರದಲ್ಲಿದ್ದ ಸಮಯದಲ್ಲಿಯೇ ಅಲ್ಲಿ ದ.ರಾ.ಬೇಂದ್ರೆಯವರು ಕಾಲೇಜಿನ ಪ್ರಚಾರ್ಯರಾಗಿದ್ದರು. ಅವರೊಂದಿಗೆ ಮಾತನಾಡಬೇಕೆಂಬ ಪ್ರಯತ್ನ ಮಾಡಲಿಲ್ಲ ಆದರೆ ಸಾಹಿತ್ಯ, ಚಿತ್ರಕಲೆಯ ಸಂಬಂಧದ ಉತ್ಸಾಹ ಬೆಳೆಯುತ್ತಲೇ ಇತ್ತು. ಅಲ್ಲಿದ್ದಾಗ ಧಾರವಾಡದಲ್ಲಿ ವಾಸವಾಗಿದ್ದ ಬಿ.ಎಂ.ಶ್ರೀ. ನಿಧನರಾದರು. ಸಂಯುಕ್ತ ಕರ್ನಾಟಕ ಪತ್ರಿಕೆಯ ಮೂಲಕ ಆ ಸುದ್ದಿ ತಿಳಿಯಿತು. ಎಲ್ಲಿ ಹೋದರೂ ಸಾಹಿತ್ಯ ಸಾಹಿತ್ಯಕ್ಕೆ ಸಂಬಂಧಿಸಿದ ಚಿತ್ರಗಳ ಪ್ಯಾಕೆಟ್ಟನ್ನು ಸಂಗಡ ತೆಗೆದುಕೊಂಡು ಹೋಗಿರುತ್ತಿದ್ದರು. ಆ ಸಂಗ್ರಹದಲ್ಲಿ ಬಿ.ಎಂ.ಶ್ರೀ.ಯವರ ಚಿತ್ರವೂ ಇತ್ತು... ಕೂಡಲೆ ಸಿಕ್ಕಿ ಆ ಚಿತ್ರದ ರೇಖಾಚಿತ್ರ ಮಾಡಿ ಬಟಗೇರಿ ಕೃಷ್ಣಶರ್ಮರು (ಆನಂದಕಂದರು) ಹೊರಡಿಸುತ್ತಿದ್ದ 'ಜಯಂತಿ' ಮಾಸ ಪತ್ರಿಕೆ ಕಳಿಸುವುದೆಂದು ಸಿದ್ಧತೆ ಮಾಡಿದರು. ಆಗ ಅವರ ಭಾವ "ಅದನ್ನೇನು ಮಾಡುತ್ತಾರವರು? ಎಂದು ಪ್ರಶ್ನಿಸಿದ್ದರು. ಮುಂದೆ ಒಂದುವಾರ ಕಳೆದಿರಬೇಕು ಅದೊಂದು ದಿನ ಅವರ ಭಾವ ದಿನಾ ಬರುವ ವೇಳೆಗಿಂತಲೂ ಮೊದಲೇ ಮನೆಗೆ ಬಂದರು. ಅವರ ಕೈಯಲ್ಲಿ ರೂಢಿಯಂತೆ ಬಿ.ಎಂ.ಶ್ರೀಯವರ ಎನ್.ಸಿ.ದೇಸಾಯಿ ಬರೆದ ಚಿತ್ರ ಹೊತ್ತ" ಜಯಂತಿ ಪತ್ರಿಕೆ ಇತ್ತು... ಹೊದಿಕೆಯ ಮೇಲೆಯೇ ಚಿತ್ರ ಪ್ರಕಟವಾಗಿತ್ತು. ಆಗ ಅವರ ಭಾವನಮುಖದ ಮೇಲೆ ಸಂತೋಷದ ಚಿನ್ಹೆ ಅಭಿಮಾನದ ಸುಳಿ ಎದ್ದು ಕಾಣುತ್ತಿದ್ದವು. ಅವರ ಭಾವ ಎನ್.ಸಿ.ದೇಸಾಯಿಯವರಿಗೆ ಅಭಿನಂದಿಸಬೇಕೆಂಬ ಶಬ್ದಗಳು ಮಾತುಗಳಲ್ಲಿವನ್ನೂ ಅವರ ಮುಖದ ಮೇಲೆ ಮೂಡಿದ್ದ ಭಾವನೆಗಳೇ ಹೇಳುತ್ತಿದ್ದವು ಆ ಸಂದರ್ಭವು ನಿಜವಾದ ಖುಷಿಯನ್ನು ತಂದಿತು. ಸಂತೋಷವಾಯಿತು. ಅನಂತರವೂ ಕೂಡ ಸ್ಥಿರ ಶೀರ್ಷಿಕಗಾಗಿ ಕೆಲ ಚಿತ್ರಗಳನ್ನು ಕಳುಹಿಸಿಕೊಟ್ಟರು. ಅದನ್ನು ಉಪಯೋಗಿಸಿಕೊಂಡ ಈ ರೀತಿಯಾಗಿ ಪ್ರಾರಂಭದ ದಿನಗಳಲ್ಲಿಯೇ ಎನ್.ಸಿ.ದೇಸಾಯಿಯವರ ಚಿತ್ರಕಲಾ ಸಾಹಿತ್ಯದೊಡನೆ ಬೆರತುಕೊಳ್ಳತೊಡಗಿದರು. ಸಹಜವಾಗಿಯೆ ಸಾಹಿತಿಗಳಿಗೆ

ಬರಹಗಾರರಿಗೆ, ಪತ್ರಕಾರರಿಗೆ, ಉಪಯೋಗವಾಯಿತು. ಆಗಲೆ ಇವರು ಒಬ್ಬ ಚಿತ್ರಕಾರ ಎಂದು ಕಲಾ ಶಿಕ್ಷಣ ಪಡೆಯುವ ಪೂರ್ವದಲ್ಲಿ ಗುರ್ತಿಸಿಕೊಂಡಿದ್ದರು.

ಸೊಲ್ಲಾಪುರದಲ್ಲಿದ್ದಾಗಿನ ಮಾತು. ಯಾವುದೋ ಕೆಲಸಕ್ಕಾಗಿ ಎನ್.ಸಿ.ದೇಸಾಯಿಯವರು ಪೇಟೆಯಲ್ಲಿ ಹೋಗುತ್ತಿದ್ದರು. ಪೇಟೆಯನ್ನು ಸೇರಬೇಕಾದರೆ ಸಂದಿಗೊಂದಿಯಿಂದ ಚಿಕ್ಕ ಓಣಿಗಳನ್ನು ದಾಟಿಕೊಂಡು ಹೋಗಬೇಕು. ಅಂಥ ಒಂದು ಚಿಕ್ಕ ಓಣಿಯಲ್ಲಿ ಒಬ್ಬ ಸೈನ್ ಬೋರ್ಡ್ ಪೇಂಟರನ ಅಂಗಡಿಯಿತ್ತು. ಅದೇ ಸಮಯ ಸೊಲ್ಲಾಪುರ ಮುನಸಿಪಾಲ್ಟಿಯ ಚುನಾವಣೆ ನಡೆಯುವುದಿತ್ತೆಂದು ಕಾಣುತ್ತದೆ. ಈ ಪೇಂಟರನಲ್ಲಿ ಸಾಕಷ್ಟು ಕೆಲಸವಿತ್ತು ಅದರಿಂದ ಇವರಿಗೆ ಉತ್ಸಾಹ ಬಂತೋ, ನೇರ ಅವರಲ್ಲಿ ಹೋಗಿ ಕೇಳಿದರು "ನಿಮ್ಮಲ್ಲಿ ಏನಾದರೂ ಚಿತ್ರಕಾರರಿಗೆ ಕೆಲಸವಿದೆಯೇ?" ಎಂದು. ಅದಕ್ಕೆ ಅವರು ನೀವು ಏನೇನು ಮಾಡಬಲ್ಲಿರಿ ಎಂಬ ಪ್ರಶ್ನೆ ಕೇಳಿದಾಗ ಅವರಲ್ಲ ಸಾಕಷ್ಟು ಹಳೆಯ ಚಿತ್ರಗಳಿದ್ದವು ಬಹುಶಃ "ಎಂಥ ಚಿತ್ರಗಳನ್ನಾದರೂ ಮಾಡಬಲ್ಲೆ ಅಕ್ಷರಿಗಳನ್ನೂ ಬರೆಯಬಲ್ಲೆ" ಎಂದು ಉತ್ತರಿಸಿದರು. ಆ ಅಂಗಡಿಯ ಮಾಲೀಕನ ಹೆಸರು "ಬಸವರಾಜ" ಎಂದಿತ್ತು. "ನಾಳೆ ಬರ್ರಿ ಒಂದು ಚಿತ್ರಮಾಡಿ ತೋರಿಸಿರಿ." ಇಲ್ಲಿ ಇದ್ದ ಚಿತ್ರಗಳಂತೆ ಚೆನ್ನಾಗಿ ಚಿತ್ರಮಾಡಿ ತೋರಿಸ್ತೀರಿ? ಎಂದು ಕೇಳಿದರು. "ನಮಗೆ ಚೆನ್ನಾಗಿ ಚಿತ್ರ ಬಿಡಿಸುವರು ಬೇಕು" ಎಂದು ತಿಳಿಸಿದರು ಆಗಲಿ "ನಾಳೆ ಚಿತ್ರ ಬಿಡಿಸಿ ತೋರಿಸುವೆ" ಎಂದು ಹೇಳಿದ್ದಕ್ಕೆ ಸರಿ ಎಂದರು. ಅವರಿಬ್ಬರ ಸಂಭಾಷಣೆ ಕನ್ನಡದಲ್ಲಿಯೇ ನಡೆಯಿತು. ಅಷ್ಟೇ ಅಲ್ಲ ಪೇಟೆಯಲ್ಲಿ ಎಲ್ಲಿ ಹೋದರೂ ಕನ್ನಡದಲ್ಲಿಯೇ ಮಾತನಾಡುವುದು ರೂಢಿಯಾಗಿ ಬಿಟ್ಟಿತ್ತು. ಆಗ ಅವರಿಗೆ ಅನಿಸುತ್ತಿತ್ತು. ಇಲ್ಲಿ ಎಲ್ಲವೂ ಕನ್ನಡವಾಗಿದೆ. ಈ ಊರು ಮಹಾರಾಷ್ಟ್ರದಲ್ಲೇಕೆ ಇದೆ ಎಂದು ಇಲ್ಲಿ ಇಷ್ಟು ಕನ್ನಡವನ್ನು ಮಾತನಾಡುವವರು ಇದ್ದರೆ. ಭಾಷೇ ಮಾತ್ರ ಒರಟಾಗಿ ನುಡಿಯುತ್ತಾರೆ. 'ಇದ್ದಾನೆ', 'ಇದ್ದಾಳೆ' ಎಂಬುದಕ್ಕೆ ಮರಾಠಿ ಶೈಲಿಯಲ್ಲಿ 'ಹಾನ' 'ಹಾಳ' ಎಂದು ಹೇಳುತ್ತಿದ್ದರು. ಇದೇ ರೀತಿ ಇನ್ನೂ ಕೆಲ ಶಬ್ದಗಳ ಅರ್ಥವೇ ಅವರಿಗೆ ಗೊತ್ತಿರಲಿಲ್ಲ. ಇದಕ್ಕೆ ಕಾರಣ ಪ್ರಾದೇಶಿಕ ಬದಲಾವಣೆ ಅದರೊಂದಿಗೆ ಗಡಿ ಪ್ರದೇಶ ಮಹಾರಾಷ್ಟ್ರ, ಆಂಧ್ರಪ್ರದೇಶಗಳ ಗಡಿಗಳು ಹೊಂದಿ ಕೊಂಡದ್ದರಿಂದ ಆ ಭಾಷೆಗಳ ಪ್ರಭಾವ ಈ ಮಿಶ್ರ ಭಾಷೆಗೆ ಕಾರಣವಾಗಿರಬೇಕು. ಆದರೆ ಭಾಷೆ ಹೇಗೇ ಇರಲಿ ಸೊಲ್ಲಾಪುರದಲ್ಲಿ ಕನ್ನಡ ಪ್ರಭಾವ ಹೆಚ್ಚೆಂಬುದು ಮಾತ್ರ ಇವರಿಗೆ ತಿಳಿಯಿತು.

ಮರುದಿನ ಚಿತ್ರ ತಯಾರಿಸಿಕೊಟ್ಟು, ಬಸವರಾಜರ ಅಪೇಕ್ಷೆಗೆ ಮೀರಿಯೂ ಚಿತ್ರ ಚೆನ್ನಾಗಿ ಆಗಿತ್ತು! ಆಗ ಎನ್.ಸಿ.ದೇಸಾಯಿಯವರಿಗೆ "ನಾನು ಇಷ್ಟು ಚೆನ್ನಾಗಿ ಚಿತ್ರಿಸುತ್ತೇನೆಂಬ ಭರವಸೆಯೂ ಅವರಿಗೆ ಇರಲಿಲ್ಲ! ಕಾರಣ ಆ ಮಧ್ಯದಲ್ಲಿ ಚಿತ್ರಿಸಿದ್ದು ಅದೇ ಮೊದಲು. Banner ಬರೆಯುವ ರೀತಿಯಲ್ಲಿ ಕಟ್ಟಿಗೆ ಫ್ರೇಮಿಗೆ ಬಟ್ಟೆ ಬಡಿದು ಅವರ ಮೇಲೆ ಪೌಡರಗಳಿದ ಕಲಿಸಿ ಕೊಂಡು ತಯಾರು ಮಾಡಿದ ವರ್ಣಗಳಿಂದ ಚಿತರಣ ಮಾಡಿ ಅಂತೂ ಉತ್ತಮ ಚಿತ್ರಣ ಮಾಡಿ ಗೆದ್ದರು. ಸೊಲ್ಲಾಪುರದಲ್ಲಿ ಅದೇ ವೇಳೆಗೆ ಝಿಂಗಾಡೆ

ಎಂಬ ಒಬ್ಬ ಪೊಸ್ಟರ ಚಿತ್ರಕಾರ ಪ್ರಸಿದ್ಧನಾಗಿದ್ದ. ಉತ್ತಮ ಚಿತ್ರಬೇಕೆಂದರೆ ಎಲ್ಲರೂ ಅವನಲ್ಲಿಗೆ ಧಾವಿಸುತ್ತಿದ್ದರು. ಆಗ ಎನ್.ಸಿ.ದೇಸಾಯಿಯವರ ಬಿಡಿಸಿದ ಚಿತ್ರವನ್ನು ನೋಡಿ ಬಸವರಾಜರ ಕಲ ಗೆಳೆಯರು ಝಿಂಗಾಡೆ ಚಿತ್ರಿಸಿದಂತೆಯೆ ಆಗಿದೆ ಎಂದರು. ಅಂದರೆ ಅವರಿಗೆ ಬಹಳ ದಿನ ಕೆಲಸ ಮಾಡಲು ಅವಕಾಶ ದೊರೆಯಲಿಲ್ಲ. ಕಾರಣ ಅವರ ಚಿಕ್ಕಪ್ಪ ತೀರಿಕೊಂಡಿದ್ದರಿಂದ ಅವರ ಕೆಲಸ ಮಾಡುವುದು ಅಲ್ಲಿಗೆ ಮುಕ್ತಾಯವಾಯಿತು.

ಎನ್.ಸಿ.ದೇಸಾಯಿಯವರು ಸೊಲ್ಲಾಪುರದಲ್ಲಿರವಾಗಲೇ ತಂದೆಯವರ ಕಾರ್ಡೊಂದು ಭಾವನ ಮುಖಾಂತರವಾಗಿಯೇ ಕಳಿಸಿಕೊಟ್ಟಿದ್ದರಂತೆ. ನನ್ನ ಚಿಕ್ಕಪ್ಪ ಭಯ್ಯೊ ಸಾಹೇಬರು ತೀರಿಸಿಕೊಂಡ ಸುದ್ದಿಯನ್ನು ತಂದಿತ್ತು. ಅದರಿಂದ ಅವರು ತಕ್ಷಣ ಊರಿಗೆ ಮರಳಿದರು. ಅವರು ಧನುರ್ವಾಯುವಿನಿಂದ ತೀರಿಕೊಂಡಿದ್ದರೆಂದು ತಿಳಿಯಿತು. ಧನುರ್ವಾಯು ಎಂದರೆ ಮನುಷ್ಯ ಬಿಲ್ಲಿನಂತೆ ಮಣಿಮಣಿದು ಹೊರಳಾಡಿ ಪ್ರಾಣ ಬಿಡುತ್ತಾನಂತೆ. ಹೃದಯಾಘಾತದಂತೆ ಅದು ಬಂದ ಕೆಲನಿಮಿಷಗಳಲ್ಲಿಯೇ ಪ್ರಾಣ ಬಿಡುತ್ತಾರೆ.

ಎನ್.ಸಿ.ದೇಸಾಯಿಯವರ ಚಿಕ್ಕಪ್ಪನಲ್ಲಿದ್ದ ಕೆಲವಿಶಿಷ್ಟ ಗುಣಗಳ ಬಗ್ಗೆ ಹೇಳಲೇಬೇಕು. ಚಿಕ್ಕಪ್ಪ ಜೀವಂತವಿರುವವರೆಗೂ ತಂದೆಯವರು ಗೌಡಕಿಯನ್ನು ಮತ್ತಾರಿಗೂ ನೇಮಿಸಿರಲಿಲ್ಲ. ಆಗಿನ ಪೊಲೀಸು ಖಾತೆಯಲ್ಲಿ ಚಾಣಾಕ್ಷಗೌಡ ಎಂದು ಹೆಸರು ಪಡೆದಿದ್ದರು. ಕೆಲವು ಖೂನಿ ಅಪರಾಧಗಳನ್ನು ಪತ್ತೆಹಚ್ಚುವಲ್ಲಿ ಸ್ವತಃ ಅವರು ಸರಿ ಕೆಲಸ ಮಾಡುತ್ತಿದ್ದರು. ಪೊಲೀಸು ಖಾತೆಯವರಿಗೆ ವಿವರ ನೀಡುವದು ಅವರ ಚಿಕ್ಕಪ್ಪನ ಧ್ಯೇಯವಾಗಿರುತ್ತಿತ್ತು. ಅಂಥ ವಿವರಗಳಿಂದ ಪೊಲೀಸು ಖಾತೆಯವರು ಕೆಲ ಅಪರಾಧಗಳನ್ನು ಪತ್ತೆ ಹಚ್ಚಿದ್ದುಂಟು. ಹೀಗಾಗಿ ಎಲ್ಲಿಯಾದರೂ ಅಪರಾಧ ಒಂದು ನಡೆಯಿತೋ ಅವರ ಚಿಕ್ಕಪ್ಪನಿಗೆ ಪೋಲಿಸರು ಆಮಂತ್ರಣ ಕೊಟ್ಟಿರುತ್ತಿದ್ದರು. ಈ ರೀತಿಯಾಗಿ ಅಪರಾಧ ಪತ್ತೆ ಹಚ್ಚುವಲ್ಲಿ ಚಾಣಾಕ್ಷನಾಗಿದ್ದನೋ ಹಾಗೆಯೇ ಅವರೊಬ್ಬ ಉತ್ತಮ 'ಸಿಕಾರಿ'ಯೆಂದು ಹೆಸರು ಗಳಿಸಿದ್ದರು.

ಎನ್.ಸಿ.ದೇಸಾಯಿಯವರ ಊರು ಇರುವ ಪ್ರದೇಶ ಮಲೆನಾಡಂತೂ ಅಲ್ಲವೇ ಅಲ್ಲ. ಆದರೂ ಆಗಿನ ಕಾಲದಲ್ಲಿ ಅಲ್ಲಲ್ಲಿ ಕಾಡುಗಳನ್ನು ಬೆಳೆಸುತ್ತಿದ್ದರು. ಅಂಥ ಪೊದೆಗಳಲ್ಲಿಯೇ ಚಿರತೆ, ಕಾಡು ಹಂದಿ, ಮೊಲಗಳು ಮುಂತಾದ ಪ್ರಾಣಿಗಳು ಇರುತ್ತಿದ್ದವು. ಅಲ್ಲದೆ 'ಡಬ್ಬಗಳ್ಳಿ' ಎಂಬ ಕ್ಯಾಕ್ಟಸ್ ಥರಹದ ಕಾಡು ಆಗಿನ ಕಾಲದಲ್ಲಿ ತುಂಬಿರುತ್ತಿದ್ದವು. ತಾನಾಗಿಯೇ ದಟ್ಟವಾಗಿ ಬೆಳೆಯುತ್ತಿದ್ದ 'ಕಳ್ಳಿ' ವನ್ಯ ಪ್ರಾಣಿಗಳಿಗೆ ಆಶ್ರಯ ಕೊಡುತ್ತಿದ್ದವು, ಹೀಗಾಗಿ ಅವರ ಚಿಕ್ಕಪ್ಪನಿಗೆ ಬೇಟೆಯ ಹವ್ಯಾಸ ಪ್ರಾರಂಭವಾಯಿತು ಮನೆಯಲ್ಲಿ ಡಬಲ್‌ಬಾರ, ೧೨ bore ಬಂದೂಕು ಇತ್ತು. ಆ ತುಬಾಕಿಯಲ್ಲಿ ಒಂದು ಸಮಯಕ್ಕೆ ಎರಡು ಕಾಡತೊಸುಗಳನ್ನು ಲೋಡ ಮಾಡಲು ಸಾಧ್ಯವಿತ್ತು. ಬೇಟೆಯ ಹವ್ಯಾಸ ತೀಕ್ಷ್ಣವಾದಂತೆ ಅವರ ಚಿಕ್ಕಪ್ಪ ಇನ್ನೊಂದು ತುಬಾಕಿಯನ್ನು ತರಿಸಿದ್ದನು. ಅದರಲ್ಲಿ ಒಂದು ಸಲಕ್ಕೆ ಏಳು ಕಾಡತೂಸುಗಳನ್ನು ಲೋಡ್ ಮಾಡುವ ಅನುಕೂಲತೆ ಇತ್ತು.

ಎನ್.ಸಿ.ದೇಸಾಯಿಯವರ ಚಿಕ್ಕಪ್ಪ ಬೇಟೆಗೆ ಹೊರಟನೆಂದರೆ ಅವನಿಗೆ ಸಹಾಯಕರಾಗಿ ೬-೭ ಜನ ಓಲೆಕಾರರು ಇರುತ್ತಿದ್ದರು. ಅದರಲ್ಲಿ ರಾಜೇಸಾಬ ಅಂಗಡಿ ಎಂಬುವನು ಮುಖ್ಯ. ಅವನು ಒಳ್ಳೆಯ ಸಹಾಯಕನಾಗಿರುತ್ತಿದ್ದನು. ಆ ಕಾಡುಪ್ರಾಣಿ, ವಾಸ್ತವ್ಯದ ಸ್ಥಳ, ಅವುಗಳ ಚಲನವಲನಗಳ ಸುಳಿವು, ಈ ಎಲ್ಲ ವಿವರಗಳನ್ನು ಪತ್ತೆ ಹಚ್ಚುವುದೂ ರಾಜೇಸಾಬನ ಕೆಲಸವಾಗಿತ್ತು. ಈ ವಿವರಗಳು ದೊರೆತ ಮೇಲೆಯೇ ಬೇಟೆಯದಿನ, ಬೇಟೆಯ ಸ್ಥಳ, ಬೇಟೆಯ ಸಮಯಗಳನ್ನು ನಿಶ್ಚಿತ ಪಡಿಸಲಾಗುತ್ತಿತ್ತು. ಎಲ್ಲ ಸರಿಯಾಗಿ ಗೊತ್ತಾದೊಡನೇ ಆಹಾರ ನೀರು ಸಂಗ್ರಹಿಸಿಕೊಂಡು ತುಬಾಕಿಗಳಿದ್ದರೂ ಉಳಿದವರ ಕೈಯ್ಯಲ್ಲೂ ಬರ್ಚಿ, ಕೊಡ್ಲಿ, ಖಡ್ಗಗಳು ಮುಂತಾದ ಆಯುಧಗಳೂ ಇರುತ್ತಿದ್ದವು.

ಎನ್.ಸಿ.ದೇಸಾಯಿಯವರ ಚಿಕ್ಕಪ್ಪ ಆರು ಚಿರಿತೆಗಳನ್ನು ಬೇಟೆಯಾಡಿದ್ದರಂತೆ. ನಂತರ ಅಡವಿಯೂ ಕ್ಷೀಣಿಸಿತು ಡಬ್ಬಗಳಿಗೆ ಅದಾವುದೋ ಒಂದು ಹುಳ ಹತ್ತಿ ಅದು ನಾಶವೇ ಆಗಿ ಹೋಯಿತು. ಅಷ್ಟೊತ್ತಿಗೆ ಅವರ ಚಿಕ್ಕಪ್ಪನೂ ಕಾಲವಾಗಿದ್ದರು.

**ಮುಂಜಿವಿ**

ಎನ್.ಸಿ ದೇಸಾಯಿಯವರ ತಂದೆ ಮನೆಯಲ್ಲಿ ಮಹತ್ವದ ಕೆಲಸ ಕಾರ್ಯಕ್ರಮ ಹಮ್ಮಿಕೊಳ್ಳುವ ಮುಂಚೆ ಪೂಜ್ಯ ಶ್ರೀ ನಾರಾಯಣ ಭಗವಾನರಿಗೆ ತಿಳಿಸಿ ಅವರ ಅಪ್ಪಣೆ ಇಲ್ಲದೆ ನೆರವೇರಿಸುತ್ತಿರಲಿಲ್ಲ. ಅದೇ ತಾನೇ ಶೇಷಾಚಲ ಸಾಧುಗಳ ಜಯಂತೋತ್ಸವ ಮುಗಿದಿತ್ತು ಭಗವಾನರು ಇನ್ನೂ ಆನಂದವನದಲ್ಲಿಯೇ ಇದ್ದರು ಸೇವೆಗೆ ಇನ್ನೂ ಹೋಗಿರಲಿಲ್ಲ. ೧೯೩೩ರಲ್ಲಿ ಎನ್.ಸಿ ದೇಸಾಯಿಯವರು ಆ ವರ್ಷದ ಬಾಲಕನಾಗಿದ್ದನು. ದಿನವೂ ಹೋಗುವಂತೆ ಅವತ್ತು ಕೂಡ ತಂದೆಯವರ ಜೊತೆ ಆನಂದವನಕ್ಕೆ ಹೋಗಿದ್ದರು. ಎನ್.ಸಿ. ದೇಸಾಯಿಯವರ ತಂದೆಯವರಿಗೆ ಆಕಸ್ಮಿಕವಾಗಿ ಅದೇನು ಹೊಳೆಯಿತೊ ಏನೋ "ಮಗನ ಮುಂಜಿವಿ ಮಾಡಬೇಕು. ಯಾವಾಗ ಮಾಡಿದರೆ ಚಲೋ? ಎಂದು ನಾರಾಯಣ ಭಗವಾನಗೆ ಕೇಳಿದರು. ತಾವು ಹೇಳಿದರೆ ನಾನು ಸಿದ್ಧತೆಮಾಡಿ ಕೊಳ್ಳುತ್ತೇನೆಂದು ಹೇಳುವುದೇ ತಡ ತಡಮಾಡದೆ ಭಗವಾನರ ವಾಣಿ ಸ್ಫೋಟವಾಯಿತು "ನಾಳೆಲ್ಲದೇ ನಾಡಿದ್ದು ಮೂಹೂರ್ತ ಚೆನ್ನಾಗಿದೆ ಅವತ್ತು ಮಾಡಿಬಿಡ್ರಿ" ಎಂದು ನಿಶ್ಚಿತವಾಣಿಯಲ್ಲೇ ಆಜ್ಞಾಪಿಸಿದರು ಹೌಹಾರಿದ. ಇವರ ತಂದೆ ಸ್ತಂಬೀಭೂತರಾಗಿ ನಿಂತು ಅಂದರೆ ಒಂದೇ ದಿನದಲ್ಲಿ ಎಲ್ಲ ತಯಾರಿಮಾಡಬೇಕು ದೊಡ್ಡ ಬಳಗ ಎಲ್ಲರಿಗೂ ಆಮಂತ್ರಣ ನೀಡಬೇಕು ಎಂದೆನ್ನುತ್ತ ತಮ್ಮಲ್ಲಿಯೇ ಗುಣಗುಟ್ಟಿದರು. ತಂದೆಯವರು ನಾರಾಯಣ ಬಗವಾನರು ಮತ್ತೆ ಆದಾಕಾರಣ ವಾಣಿಯಿಂದ "ಏನಿಲ್ಲ ಸ್ವಾಮಿ ಇದ್ದಾನೆ ಎಲ್ಲ ಸರಿ ಹೋಗುತ್ತದೆ. ಕಾರ್ಯ ಪ್ರಾರಂಭಿಸಿರಿ ಮೊನ್ನೆಯೇ ಜಯಂತ್ಯೋತ್ಸವ ಮುಗಿದಿದೆ ಎಂದರು." ಎನ್.ಸಿ. ದೇಸಾಯಿಯವರ ತಂದೆ ಒಂದು ಕ್ಷಣವೂ ಅಲ್ಲಿ ನಿಲ್ಲಲಿಲ್ಲ ತಡಬಡಿಸುತ್ತ ಬಂಗ್ಲೆಗೆ ಬಂದವರೇ "ಏಭಯ್ಯೊ ಬಾಯಿಲ್ಲೆ" ಎಂದು ಅವರ ತಮ್ಮನನ್ನು ಕರೆದು ನೋಡು ಇಲ್ಲಿ "ನಾನಿ" (ಎನ್.ಸಿ. ದೇಸಾಯಿಯವರು) ಮುಂಜವಿಯನ್ನು ನಾಡದ್ದೇ ಮಾಡುವದೆಂದು ಭಗವಾನರು ಹೇಳಿದ್ದಾರೆ. ಅದರ ಎಲ್ಲ ತಯಾರಿ ಮಾಡಬೇಕೆಂದು ಹೇಳಿದರು.

ಆಗಿನ ಕಾಲವೆಂದರೆ ದೇಶಗತಿಯ ಭರಭರಾಡಿಯ ಕಾಲ ಮನೆತುಂಬ ಆಳುಗಳು ಕರೆದೊಡನೆ "ಓ" ಕೊಡುವ ರೈತರು ಅಷ್ಟೇ ದೇಶಗತಿ ಬಗ್ಗೆ ಅಭಿಮಾನ, ಭಕ್ತಿ ತಳೆದ ಊರ ಜನ (ಹಳ್ಳಿಗರ) ನೆರೆಯುವಲ್ಲಿ ತಡವಾಗಲಿಲ್ಲ. ತಮ್ಮ ಯೋಗ್ಯತೆಗೆ ತಕ್ಕ ಕೆಲಸಗಳನ್ನು ತಾವೇ ಹಂಚಿಕೊಂಡರು. ಕೆಲವರು ಚಕ್ಕಡಿ ತೆಗೆದುಕೊಂಡು ತೆಂಗಿನಕಂಬ ಬಾಳೆಗಿಡ ತರಲು ತೋಟಕ್ಕೆ ಇನ್ನೂ ಕೆಲವರ ಬಂಗಲೆಯ ಮುಂದೆ ಹಂದರ ಹಾಕಲು ಕಂಬನಟ್ಟಿಸಲು ಗುದ್ದಲಿ ತೆಗೆಯಲುದ್ಯುಕ್ತರಾದರು ಇನ್ನೂ ಕೆಲವರು ಹಂದರ ಸುತ್ತಕಟ್ಟಲು ಮಾವಿನ ತೋರಣ ಮಾಡಲಹಗ್ಗ ಹುರಿಗಳನ್ನು ಕಲೆಹಾಕಿದರು. ಇನ್ನೂ ಕೆಲವರು ರಸ್ತೆಯಲ್ಲೇ (ಬಂಗ್ಗೆದವರಿಗೆ) ಇದ ಮಾವಿನ ತೋರಣವನ್ನು ತಂದರು. ಓಗೆ ಅಲ್ಪ ವೇಳೆಯಲ್ಲೇ ನೂರಾರು ಜನಸೇರಿ ಹತ್ತೆಂಟು ಕೆಲಸಗಳನ್ನು ಪ್ರಾರಂಭಿಸಿದರು. ಕಲವಾಲೀಕಾರು, ವಾಲಗದವರ, ಮನೆಗೆ ಹೋಗಿ ಬಜಂತ್ರಿಯವರನ್ನು ಕರೆತಂದರು. ಈ ಎಲ್ಲ ಚಟುವಟಿಕೆಗಳು ನಡೆಯುತ್ತಿದ್ದಂತೆಯೇ, ಶೇಷಾಚಾರ್ಯರು ಬಂದೂ ಆಯಿತು ಆಗ ಅವರ ತಂದೆಯವರು ಹೇಳಿದರು "ಏ ಆಚಾರೀ" ಯಾವ ಗಾಡಿ ಅದ ನೋಡು ಹುಬ್ಬಳ್ಳಿಗೆ ಹೋಗಿ "ಜಾನು"ನ (ಅವಳು ಪಾತರದವಳು ಸಂಗೀತವನ್ನು ಅಭ್ಯಾಸ ಮಾಡಿದ್ದಳು) ಕರಕೊಂಡು ಬಾ ಎಂದು ಆಜ್ಞಾಪಿಸಿದರು. ಉಪನಯನದ ದಿನ ಬೆಳಿಗ್ಗೆಯಿಂದ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಮಾತ್ರ, ಭೂಸ, ಭಿಕ್ಷೆಸಾಡೆ (ಮುಂಜವಿ ಮಣೆಯ ಮೆರವಣಿಗೆ) ಊಟದ ಗೌಜನ್ನಂತೂ ಹೇಳತೀರದು ಬ್ರಹ್ಮ ಭೋಜನದ ವ್ಯವಸ್ಥೆ ಬೇರೆ ಅನ್ಯ ಜಾತಿಯ ಸ್ನೇಹಿತರು ರೈತಾಪಿ ಜನರ ಊಟವನ್ನು ವ್ಯವಸ್ಥಿತವಾಗಿಯೇ ಏರ್ಪಡಿಸಿದ್ದರು. ಸ್ನೇಹಿತರ ಗುಂಪಿಗೆ ತಕ್ಕಂತೆ ಮೇಲ್ವಿಚಾರಣೆಯನ್ನು ಆ ಜನಕ್ಕೆ ಪರಿಚಯವಿದ್ದವರಿಂದಲೇ ಏರ್ಪಡಿಸಿದ್ದರು. ಅವರೆ ಆತಿಥ್ಯಕ್ಕೆ ಯಾವ ಕೊರತೆಯೂ ಇರಲಿಲ್ಲ.

ಒಂದು ಮೆರವಣಿಗೆ ಮುಂಜಿಮಣೆಯನ್ನು ದೇವಸ್ಥಾನಕ್ಕೆ ಹೋಗಿ ಬರಲು ಇನ್ನೊಂದು ಊರಲ್ಲಿ ಮೆರವಣಿಗೆ ನಡೆದದ್ದು ಸಾಯಂಕಾಲ ಅದೇನು ಗ್ಯಾಸುಗಳು, ಅದೇನು ಪಟಾಕಿ, ಮದ್ದು, ನಡುನಡುವೆ ತುಬಾಕಿನಯ ಕಾಡತೂಸಿನಿಂದ ಬಣ್ಣ ಬಣ್ಣದ ಹೊಗರೆಯುವ ಮದ್ದಿನ ಸುರಿಮಳೆ ವಾಲಗದವರು, ಬ್ಯಾಂಡು, ಡೊಳ್ಳು ಕುಣಿತ, ಲೇಝಿಮ್, ಮುಂತಾದ ವಾದ್ಯಗಳು ಮುಂಜವಿ ಮಣಿ ಶೃಂಗಾರವಾದ ಕುದುರೆಯ ಮೇಲೆ ಸವಾರಿ, ಬಾಜು ಬಾಜುಕೆ, ಛತ್ರರಿ ಛಾವುರುಗಳು, ಕುದುರೆಯನ್ನು ಸಾಕಿ ಸಲುಹಿದ 'ಕೋಲಕಾರ ಮರ್ದಾನ' ಕೈಯಲ್ಲಿಯೇ ಲಗಾಮು ಮತ್ತೆ ಸಮವಸ್ತ್ರದರಿಸಿದ ಕೆಲವಾಲೀಕಾರರು ಕುದುರೆಯ ಇಬ್ಬದಿಗೆ ಬಿಚ್ಚುಗತ್ತಿಯನ್ನು ಹೆಗಲಿಗೇರಿಸಿ ಕುದುರೆಯ ಹೆಜ್ಜೆಗೆ ತಾಳಹಾಕುತ್ತ ನಡೆದಿದ್ದಾರೇನೋ ಎಂಬಂತೆ, ಕವಾಯತು ನಡೆಸುವಲ್ಲಿ ನಡೆದರು. ಸುತ್ತಲೂ ಜನಸ್ತೋಮ ಹಳ್ಳಿಯ ಮಕ್ಕಳಿಗೊಂದು ಗೌಜು, ಹಳ್ಳಿಯ ಹೆಂಗಳೆಯರೆಲ್ಲ ದೇಸಾಯರ ಮಗನ ಮುಂಜವಿಯೆಂದು ಇದ್ದದರಲ್ಲಿಯೇ ಉತ್ತಮ ಸೀರೆಯುಟ್ಟು ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಮೆರವಣಿಗೆ ಮುಖ್ಯ ಕೆಲ ದೇವಸ್ಥಾನಗಳಿಗೆ ಹೋಗಿ ಬಂಗಲೆಗೆ ಮರಳಿತು. ಅದು ಮರಳುತ್ತಿದ್ದಂತೆಯೇ ಮದ್ದಿನ ವರ್ಣರಂಜಿತ ಹೂಬಾಣ, ಕುಡಿಕೆಗಳ ನೋಟ, ಹತ್ತಿರದ ಊರು ಗುತ್ತಲದ ಮದ್ದುಗಾರರು ಆಗಿನ ಕಾಲದಲ್ಲಿ ಪ್ರಸಿದ್ಧರು. ಆ ಅಲ್ಪ ವೇಳೆಯಲ್ಲಿಯೇ ಅವರು ಎಂತೆಂಥ

ಚಮತ್ಕಾರಿಕ ಮದ್ದನ್ನು ಸಿದ್ದಮಾಡಿದ್ದರು. ನೋಡಿದರೆ ಅಚ್ಚರಿಯಾಗುವಂತಿತ್ತು. ರಾತ್ರಿ ಕಪ್ಪು ಆಕಾರದ ಹಿನ್ನೆಲೆಯಲ್ಲಿ ವರ್ಣರಂಜಿತ ನೋಟ ಅಹ್ಲಾದವನ್ನುಂಟು ಮಾಡಿತ್ತು. ಇವನ್ನೆಲ್ಲ ನೋಡುತ್ತಿದ್ದ ಹಳ್ಳಿಗರು ಸಂತೋಷ ಸಾಗರದಲ್ಲಿಯೇ ಈಜಾಡಿರಬೇಕು. ಮುಂಜಿವಿ ಈ ರೀತಿಯಾಗಿ ವಿಜೃಂಭಣೆಯಿಂದಲೇ ಜರುಗಿತು.

ಎನ್.ಸಿ. ದೇಸಾಯಿಯವರ ಮನೆತನದಲ್ಲಿ ಧಾರ್ಮಿಕ ಪಾರಮಾಧಿಕಾಯಗಳೆಲ್ಲೂ ಅಷ್ಟೇ ಶ್ರದ್ಧೆ ನಿತ್ಯವೂ ಪುರೋಹಿತರು ಬರಲೇಬೇಕು. ತಪ್ಪದೇ ದೇವರ ಪೂಜೆ ನಡೆಯಲೇಬೇಕು. ಹಬ್ಬ ಹುಣ್ಣಿಮೆಗಳಲ್ಲಿ ತಕ್ಕ ಉತ್ಸವಗಳಂತೂ ತಪ್ಪದೇ ಸಾಗಬೇಕು. ನವರಾತ್ರಿ, ಶ್ರಾವಣ ಮಾಸಗಳಲ್ಲಿ ಎಲ್ಲ ಹಬ್ಬಗಳು ನಡೆಯಬೇಕು. ಶ್ರಾವಣಮಾಸದಲ್ಲಿ ಶುಕ್ರವಾರದ ಗೌರಿ, ದೀಪಾವಳಿಯ ಹಬ್ಬ, ಗಣಪತಿಯ ಹಬ್ಬ, ಎಲ್ಲವನ್ನೂ ಭವ್ಯ ರೀತಿಯಲ್ಲೇ ಆಚರಿಸುತ್ತಿದ್ದರು.

ಎನ್.ಸಿ. ದೇಸಾಯಿಯವರ ಮನೆಯಲ್ಲಿ ಪ್ರತಿಯೊಂದು ಹಬ್ಬವೂ ವೈಭವದಿಂದ ಇವರ ತಂದೆಯವರ, ಕಾಲದವರೆಗೂ ನಡೆಯುತ್ತಿದ್ದವು. ಇವರ ತಂದೆಯ ಕಾಲಕ್ಕೆ 'ಉಳುವವನೆ ಒಡೆಯ' ಎಂಬ ಕಾಯಿದೆ ಬಂದ ಮೇಲೆ ಇದ್ದ ಆಸ್ತಿಯನ್ನು ಮತ್ತೊಬ್ಬರಿಗೆ ಮಾರುವಂತಿಲ್ಲ. ಪರಾಯ ತಾಬಾ ಮಾಡುವಂತಿಲ್ಲ ಇದ್ದ ರೈತನನ್ನು ಬಿಡಿಸುವಂತಿಲ್ಲ ಮುಂತಾದ ಕಟ್ಟಳೆಗಳು ಆ ಕಾಯಿದೆಯಲ್ಲಿ ಅಡಕವಾಗಿದ್ದವು. ಹೀಗಾಗಿ ಮೊದಲಿನಂತೆ ಆಸ್ತಿಯನ್ನು ಹಗುರವಾಗಿ ವಿಲೇವಾರಿ ಮಾಡುವಂತಿರಲಿಲ್ಲ. ಈ ರೀತಿಯಾಗಿ ೯೦೦ ಎಕರೆ ಆಸ್ತಿ ಕೈಬಿಟ್ಟಿತು. ಆಸ್ತಿ ಎಲ್ಲ ಕಳೆದುಕೊಂಡ ನಂತರ ಹಬ್ಬಹರಿದಿನಗಳು ಅವರ 'ಮನೆ ಪೂರ್ತಿ'ಗೆ ಮಾಡುತ್ತಿದ್ದರು. ಆದರೆ ಎನ್.ಸಿ. ದೇಸಾಯಿಯವರ ವಿಚಾರಗಳೇ ಬೇರೆಯಾಗಿದ್ದವು. ಅವರು ವೈಚಾರಿಕವಾಗಿಯೇ ಹಬ್ಬಗಳು ಮತ್ತು ಅನ್ಯ ಕಾರ್ಯಕ್ರಮಗಳನ್ನು ಆಚರಿಸುತ್ತಿದ್ದರು.

## ಮದುವೆ

"೧೯೪೫-೪೬ರ ಸುಮಾರಿಗೆ ಕನ್ಯಾಪಿತೃಗಳು ತಂದೆಯವರೆಡೆ ಅಡ್ಡಾಡತೊಡಗಿದರು. ನಿಜವಾಗಿ ಇದು ಬಹು ಆಶ್ಚರ್ಯಕರವಾದ ವಿಷಯ. ಆಸ್ತಿಯು ಕೈಬಿಟ್ಟಿತು. ಇದ್ದುಬಿದ್ದ ಆಸ್ತಿ ಕೂಡ ಯಾವಾಗ ಹೋಗುವುದೋ ಎಂಬ ಅಭರವಸೆಯ ತಕ್ಕಡಿಯಲ್ಲಿ ತೂಗಾಡುತ್ತಿತ್ತು. ಇನ್ನು ವರನಾದ ನಾನು ಯಾವ ಶಿಕ್ಷಣವನ್ನು ಹೊಂದಿದವನಲ್ಲ ಯಾವ ನೌಕರಿಗೂ ಅರ್ಹನಲ್ಲದವನು ಇಂಥ ಹಿನ್ನಲೆಯಲ್ಲು ಕನ್ಯಾಪಿತೃಗಳು ಬರುತ್ತಿರುವುದನ್ನು ಕಂಡು ನನಗೆ ಆಶ್ಚರ್ಯ, ಕೆಲವರು ಕನ್ಯಾಮಣಿಗಳನ್ನು ಮನೆಗೇ ಕರೆತಂದರು. ಕೆಲವೆಡೆಯಿಂದ ಕನ್ಯಾ ನೋಡಲು ಆಮಂತ್ರಣ ಬರುತ್ತಿತ್ತು" ಎಂದು ಎನ್.ಸಿ. ದೇಸಾಯಿಯವರು ಡೈರಿಯಲ್ಲಿ ಪ್ರಸ್ತಾಪಿಸಿದ್ದಾರೆ.

ಭೀಮಾಚಾರ್ಯರ ಪತ್ನಿಗೆ ಒಂದು ಗಂಡು ಒಂದು ಹೆಣ್ಣು ಮಕ್ಕಳು. ಸ್ವಲ್ಪೇ ದಿನಗಳಲ್ಲಿ ಮೇಲೆ ಭೀಮಾಚಾರ್ಯರ ಪತ್ನಿ ತೀರಿಕೊಂಡರು. ಆದರೆ ಭೀಮಾಚಾರ್ಯ ಮತ್ತೊಂದು ಮದುವೆ ಮಾಡಿಕೊಂಡರು, ಎರಡನೆ ಪತ್ನಿಯಿಂದ ಅವಳಿ ಗಂಡುಮಕ್ಕಳು ಜನಿಸಿದರು.

ನಿಜ ಹೊವೃತ್ತಿ ಬಂಧುಗಳಿಗೂ ದೇಸಾಯರಿಗೂ ಮೈಮನಸ್ಸಿದ್ದರೂ ಈ ಬೀಗತನದ ಸೂಚನೆ ಬಂತಾದರೂ ಹೇಗೆ ಈ ಪ್ರಶ್ನೆ ಬಂದದ್ದಾದರೂ ಹೇಗೆ? ಎಂಬುದು ಅಚ್ಚರಿ ಪಡಿಸುವಂತಹದು! ಆದರೆ ಆ ಸಂದರ್ಭಕ್ಕೊಂದು ಒಳಹಾದಿ ನಿರ್ಮಾಣವಾಗಿತ್ತು. ಎನ್.ಸಿ. ದೇಸಾಯಿಯವರ ತಂಗಿಯ ಯಜಮಾನ ಹಾನಗಲ್ಲಿನವರೆಂದು ಹೇಳಿಯಾಗಿದೆ. ಅವರು (Low) ವಕೀಲಿಕಿ ಅಭ್ಯಾಸ ಮಾಡುವಾಗ ಧಾರವಾಡದಲ್ಲಿ ಹೊನ್ನತ್ತಿಯವರ ಮನೆಯ ಎದುರಿಗೆ ಇರುತ್ತಿದ್ದರು. ದೂರದ ಆಪ್ತವ್ಯವೇನೊ ಇತ್ತು. ಸಂಪರ್ಕದ ಅಭ್ಯಾಸದಿಂದ ಸಂಬಂಧ ಹತ್ತಿರಕ್ಕೆ ಬಂದಿರಲಿಲ್ಲ. ಈಗ ಅದು ಬೆಳೆಯುತ್ತ ಬಂತು. ಎನ್.ಸಿ. ದೇಸಾಯಿಯವರ ಬೀಗ ಶಾಮರಾಯರು ಒಬ್ಬನೇ ಇರುವುದನ್ನು ಕಂಡ ಹೊನ್ನತ್ತಿ ಕುಟುಂಬದವರು ಅವರನ್ನು ಆಗಾಗ ಊಟಕ್ಕೆ ಆಮಂತ್ರಿಸುವುದು ಹಬ್ಬ ಹುಣ್ಣಿಮೆಗಳ ಸಂದರ್ಭದಲ್ಲಂತೂ ಕಡ್ಡಾಯವಾಗಿಯೇ ಶಾಮರಾಯರು ಅವರಲ್ಲಿ ಹೋಗುವುದು ನಡೆಯಿತು, ಎನ್.ಸಿ. ದೇಸಾಯಿಯವರ ತಂಗಿಯು ತನ್ನ ಪತಿಯ ಹಾದಿಯಲ್ಲೆ ನಡೆಯಬೇಕಲ್ಲ, ಅವರು ಹೊನ್ನತ್ತಿಯವರ ಗ್ರಹ ಪ್ರವೇಶಿಸಿದರು. ಆಗಾಗ ಹೋಗುವ ಅವರು ಕೂಡ ದೂರ ಉಳಿಯಲಿಲ್ಲ. ಸಂಪರ್ಕ ಸುತ್ತುವರೆದು ಕೊಂಡಿತು. ಎನ್.ಸಿ. ದೇಸಾಯಿಯುವ ತಂಗಿಯ ಗಂಡ ಶಾಮರಾಯರು ಈ ಸಂಬಂಧವನ್ನು ಕೂಡಿಸಿದರು.

ಮದುವೆಯ ಮಾತುಕತೆ ಪ್ರಾರಂಭವಾಯಿತೇನೋ. ಆದರೆ ಆ ಹುಡುಗಿಯನ್ನು ಮದುವೆಯಾಗಬೇಕಾದ ಎನ್.ಸಿ. ದೇಸಾಯಿಯವರನ್ನು ಯಾರೂ ಕೇಳಲಿಲ್ಲವಂತೆ ಬಂಧುಗಳು ಅಲ್ಲದೆ ಇನ್ನೂ ಕೆಲ ಊರವರು, ಆಪ್ತರು, ಗುರುಗಳು ಮುಂತಾದವರು ಈ ಸಂದರ್ಭದಲ್ಲಿ ಕೇಳಿಬರಲಿಲ್ಲ. ನಿಶ್ಚಯದ ದಿನವನ್ನೇ ಗೊತ್ತು ಮಾಡಿದರು ಅದನ್ನು ಮಾತ್ರ ತಿಳಿಸಿದರು. ನಿಶ್ಚಯವು ಆಯಿತು. ಮದುವೆಯೂ ಆಯಿತು. ಭೀಮಾಚಾರ್ಯರ ಮಗಳು ಶಾರದಬಾಯಿಯವರ ಜೊತೆ. ಮದುವೆ ಆನಂದವನದ ಬಂಗಲೆಯಲ್ಲೆ ನಡೆಯಿತು.

**ಆರಂಭಿಕ ಕಲಾ ಬದುಕು**

ಕಲಾಶಿಕ್ಷಣ ಪಡೆಯುವ ಪೂರ್ವದಲ್ಲಿಯೇ ಮನೆಯಲ್ಲಿ ಪ್ರಥಮ ಗುರುಗಳಿಗೆ ಅವರ ಚಿಕ್ಕಪ್ಪನವರು ಮಡಿಕೆಯ ಮೇಲೆ ಗೌರಿಯ ಚಿತ್ರ ಬರೆಯುವುದನ್ನು ಹೇಳಿಕೊಟ್ಟರು. ಬೇಸಾಯ ಕಾರ್ಯ ಮುಗಿದು ಉಳಿದ ವೇಳೆಯಲ್ಲಿ ಚಿತ್ರ ಎಂದೇನು ಇರಲಿಲ್ಲ. ಒಟ್ಟು ಗೀಚುವ ಕೆಲಸ, ಈ ಚಿತ್ರಕಲೆಯ ಆಕರ್ಷಣೆ ಹಿನ್ನೆಲೆ. ಇಲ್ಲವೆಂದಲ್ಲ ಎನ್.ಸಿ. ದೇಸಾಯಿಯವರ ಚಿಕ್ಕಪ್ಪನಿಗೆ ಇದರಲ್ಲಿ ಆಸಕ್ತಿ ಬಹಳ ಶ್ರಾವಣ ಮಾಸ ಬಂತೆಂದರೆ ಆಯಿತು. ಇವರ ಜಗುಲಿಯ ಮೇಲೆ ನೂರಾರು ಮಡಿಕೆಗಳು ಬರುತ್ತಿದ್ದವು. ಅವುಗಳ ಮೇಲೆ ಅವರು ಗೌರಿಯ ಚಿತ್ರ ಬರೆಯುತ್ತಿದ್ದರು. ಚಿತ್ರ ಸಿದ್ಧವಾದ ಮಡಿಕೆಯನ್ನು ಬ್ರಾಹ್ಮಣರೆಲ್ಲ ತೆಗೆದುಕೊಂಡು ಹೋಗುತ್ತಿದ್ದರು. ಅವಳೇ ಶ್ರಾವಣ ಮಾಸದ ಶುಕ್ರವಾರದ ಗೌರಿ ಬರೆಯುವಾಗ ಆಸ್ಥೆಯಿದ್ದವರು ಬಂದು ಸಹಾಯ ಮಾಡುತ್ತಿದ್ದರು. ಈ ರೀತಿಯಾಗಿ ಎನ್.ಸಿ. ದೇಸಾಯಿಯವರು ಪ್ರಥಮಬಾರಿಗೆ ಕುಂಚ ಮತ್ತು ವರ್ಣವನ್ನು ಕೈಗೆತ್ತಿಕೊಂಡದ್ದು. ಮಡಿಕೆಗಳ ಮೇಲೆ ಚಿತ್ರ ಬರೆಯುವ ಕೆಲಸವಿಲ್ಲದಾಗ ಮತ್ತೇನಾದರೂ

ಮಾಡುತ್ತಿದ್ದರು. "ಈಗಾಗಲೇ ಅಷ್ಟಿಷ್ಟು ಚಿತ್ರಗಳನ್ನು ಮಾಡಿದ್ದೆ, ದೇಸಾಯರ ಮಗನ ಕೈ ಚೆನ್ನಾಗಿದೆ ಚಿತ್ರ ಚೆನ್ನಾಗಿ ಬರೆಯುತ್ತಾನೆಂದು ಜನ ಅನ್ನ ತೊಡಗಿದ್ದರು." ಆ ಸಂದರ್ಭದಲ್ಲಿ ಹುಬ್ಬಳ್ಳಿ ಮನಸಿಪಲ್ ಕಾರ್ಪೋರೇಶನ್ ಆಡಳಿತಕ್ಕೆ ಸರಕಾರಿ ಅಧಿಕಾರಿಯನ್ನು ನೇಮಿಸಿದ್ದರು. 'ಬೆಣ್ಣಿ' ಎಂದು ಅವರ ಹೆಸರು ಅದೇ ಸಮಯಕ್ಕೆ ಡಾ. ನಾ.ಸು. ಹರ್ಡೇಕರ ಅವರು ಹುಬ್ಬಳ್ಳಿಯಲಿ "ಹುಬ್ಬಳ್ಳಿಗೆ ಗೆಜೆಟ್" ಎಂಬ ವಾರಪತ್ರಿಕೆಯನ್ನು ಹೊರಡಿಸಿ ಕಾರ್ಪೋರೇಶನಲ್ಲಿ ಇನ್ನು ಏನೇನು ಸುಧಾರಣೆಯಾಗಬೇಕೆಂದು ಪತ್ರಿಕೆಯ ಮೂಲಕ ಸಾರ್ವಜನಿಕವಾಗಿ ಪ್ರಕಟಿಸುತ್ತಿದ್ದರು. ಅದೊಂದು ದಿನ "ಹುಬಳಿ ಗೆಜೆಟ್" ಎಂಬ ತಲೆಬರೆಹದ ಅಕ್ಷರಗಳನ್ನು (Mast Head) ಬರೆದು ಅಂಚೆಗೆ ಕಳುಹಿಸಿದರು. ಅದಕ್ಕಾಗಿ ಹರ್ಡೀಕರರಿಗೆ ಸಹಾಯಕರಾಗಿದ್ದ. ರಾ.ವೆ. ಕರಿಗುದರಿಯವರು ೫ ರೂಪಾಯಿಗಳ ಸಂಭಾವನೆ ಕಳುಹಿದರು, ಅದೇ ಪ್ರಥಮ ಗಳಿಕೆ.

ಈ ಚಟುವಟಿಕೆ ಮುಂದೊರೆಯಿತು ಹುಬ್ಬಳ್ಳಿ ಗೆಜೆಟ್ ಕೆಲಸಗಳಲ್ಲಿಯೇ ವಿಶೇಷ ಸಂಚಿಕೆಯನ್ನು ಹೊರತರಲು ನಿರ್ಧರಿಸಿ ಅದರ ಹೊದಿಕೆಯ ಚಿತ್ರವನ್ನು ತಯಾರಿಸಲು ಎನ್.ಸಿ. ದೇಸಾಯಿಯವರಿಗೆ ಒಪ್ಪಿಸಿದರು. ಮುಂದೆ ನೇತಾಜಿ ಸುಭಾಷ ಚಂದ್ರಭೋಸರ ಚಟುವಟಿಕೆ ಜೋರಾಗಿ, ಭಾರತೀಯ ಜನರ ಮನದ ಮೇಲೊಂದು ಅಗಾಧ ಪರಿಣಾಮ ಮಾಡಿತು. ಆ ಸಂದರ್ಭದಲ್ಲಿ "ಹುಬಳ್ಳಿ ಗೆಜೆಟ್" ಪತ್ರಿಕೆ ಜಯ್ ಹಿಂದ್ ಎಂದು ಹೊಸ ನಾಮಕರಣ ಪಡೆಯಿತು, ಹಾಗೂ ಅದರ ಪ್ರಥಮ ವಿಶೇಷ ಸಂಚಿಕೆಗೆ ಹೊದಿಕೆಯ ಚಿತ್ರ. ಆಗ ತ್ರಿವರ್ಣ ಚಿತ್ರ ಪ್ರಕಟಿಸುವುದು ಬಹು ಅಪರೂಪ ಆ ಭಾಗ್ಯ ಎನ್.ಸಿ. ದೇಸಾಯಿಯವರಿಗೆ ದೊರಕಿತ್ತು ಹಾಗೂ ಅದೇ ಅವರ ಪ್ರಕಟಿತ ಪ್ರಥಮ ವರ್ಣ ಚಿತ್ರವೂ ಅಹುದು. ಏನಾದರೂ ತಾಂತ್ರಿಕ ಸಹಾಯ ಬೇಕೆಂದಾಗ 'ಪಾಠಕ' ಎಂಬುವರ "Ideal Blocks ಎಂಬ Blook Making" ಸಂಸ್ಥೆ ಸ್ಥಾಪಿಸಿದ್ದರು ಅವರು ಎನ್.ಸಿ. ದೇಸಾಯಿಯವರಿಗೆ ತಾಂತ್ರಿಕ ಸಲಹೆ ನೀಡುತ್ತಿದ್ದರು. ಅವರು ಕೆಲವು ವರ್ಷಗಳ ಕಾಲ ಮುಂಬೈಯಲ್ಲಿದ್ದು ಅನುಭವ ಪಡೆದವರಾಗಿದ್ದರು. ಅದರ ಲಾಭ ದೇಸಾಯಿಯವರಿಗೆ ಬೇಕೆಂದಷ್ಟು ಸಿಗುತ್ತಿತ್ತು.

### ಚಿತ್ರಕಲಾ ಸಲಕರಣೆಗಳು

ಎನ್.ಸಿ.ದೇಸಾಯಿಯುವರ ಚಿಕ್ಕಪ್ಪನಿಂದ ಬಂದ ಚಿತ್ರಕಲಾ ಸಲಕರಣೆಗಳು ಆಗ ಟಿ.ಎಸ್.ವೆಂಕಣ್ಣಯ್ಯನವರು ಮೈಸೂರಲ್ಲಿವಾಸವಾಗಿದ್ದ ಕಾಲ ಎನ್.ಸಿ.ದೇಸಾಯಿಯವರ ಚಿಕ್ಕಪ್ಪನಿಗೆ ಲಿಂಗನಗೌಡ ಚಿತ್ರಕಲೆಯಲ್ಲಿ ಆಸ್ಥೆಮಹಾರಾಜರ ಆಶ್ರಯದಲ್ಲಿ ವಿಶ್ವೇರಯ್ಯನವರ ಸೂಚನೆಯ ಮೇರೆಗೆ ಸಂಸ್ಥಾನ ಚಾಮರಾಜೇಂದ್ರ ಟೆಕ್‌ನಿಕಲ್ ಸ್ಕೂಲ್ ಎಂಬ ಸಂಸ್ಥೆಯನ್ನು ಸ್ಥಾಪಿಸಿ. ಚಿತ್ರಕಲೆ, ಶಿಲ್ಪಕಲೆ, ಬಡಿಗತನ ಮುಂತಾದ ಎಲ್ಲ ಕಲೆಗಳನ್ನೂ ಕಲಿಸಲು ಏರ್ಪಾಡು ಮಾಡಿತ್ತು. ಎನ್.ಸಿ. ದೇಸಾಯಿಯವರಿಗೆ ತಂದೆಯವರು ತಮ್ಮನನ್ನು ಆ ಶಾಲೆಗೆ ಚಿತ್ರಕಲಾ ಅಭ್ಯಾಸಕ್ಕಾಗಿ ಕಳಿಸುತ್ತೇನೆ. ಅವನು ತಮ್ಮಲ್ಲಿಯೆ ಇದ್ದು ಕಲಿಯುತ್ತೇನೆಂದು ಬರೆದುದಕ್ಕೆ ವೆಂಕಣ್ಣಯ್ಯನವರೂ "ಕೂಡಲೆ ಕಳಿಸಿ" ಎಂದು ಉತ್ತರಿಸಿದರು. ಅವರ

ಚಿಕ್ಕಪ್ಪ (ಲಿಂಗನಗೌಡ) ಮೈಸೂರಿಗೆ ಪ್ರಯಾಣ ಬೆಳೆಸಿದರು ಆದರೆ ಏನು ಅಡಚಣೆ ಬಂತೋ ಏನೊ ಅವರ ಚಿಕ್ಕಪ್ಪ ಅಭ್ಯಾಸವನ್ನು ಪೂರ್ಣ ಮುಗಿಸಲಿಲ್ಲವಂತೆ ಬಹುಶಃ ಕೆಲತಿಂಗಳು ಮಾತ್ರ ಮೈಸೂರಲ್ಲಿದ್ದರೆಂದು ಕಾಣುತ್ತದೆ. ನನ್ನ ವಾಡೆ, ನನ್ನ ಮನೆ, ನನ್ನ ಜಮೀನು, ಎಲ್ಲಿ ಓಡಿ ಹೋದಾವೋ ಎಂದೆನಿಸಿತೋ ಏನೋ ಮೈಸೂರಿನಿಂದ ಕಕ್ಕಿ ಬಿಕ್ಕಿ ಆಗಾಗ್ಗೆ ಮರಳಿದರು. ಈ ರೀತಿಯಾಗಿ ಅವರ ಚಿಕ್ಕಪ್ಪ ಮರಳುವಾಗ ಉಳಿದಿದ್ದ ಚಿತ್ರಕಲಾ ಸಲಕರಣೆಗಳನ್ನು ಜೊತೆಯಲ್ಲಿ ತಂದಿದ್ದರು. ಅವುಗಳೆಲ್ಲ "ನನ್ನ ಮಡಿಲಿಗೆ ಬಿದ್ದವು" "Blessings in Disgnise" ಎಂಬಂತೆ ಬಹು ಅನುಕೂಲವಾದ ಸಮಯಕ್ಕೇನೆ ಆ ಸಲಕರಣೆಗಳು ಎನ್.ಸಿ. ದೇಸಾಯಿಯವರ ಕೈ ಸೇರಿದವು. ಅವರು ಅದಕ್ಕೆ ಕುಲದೇವತೆಗೆ ಕೈ ಮುಗಿದು ಅತಿ ಉತ್ತಮ ಸಮಯಕ್ಕೆ ಸಲಕರಣೆಗಳನ್ನು ನನಗೆ ನೀಡಿದ್ದು, ಕಾರ್ಯ ಮುಂದುವರೆಸುವ ಆಶೀರ್ವಾದವನ್ನೂ ನನಗೆ ನೀಡು ಎಂದು ಪ್ರಾರ್ಥಿಸಿದರು. ಅವರ ಪ್ರಾರ್ಥನೆ ಕುಲದೇವತೆಗೆ ತಲುಪಿತೊ ಏನೊ ಮುಂದೆರಡು ದಿನ ಕಳೆದಿರಬೇಕು ಅಂದು ಆನಂದವನದ ಕಾರುಭಾರು ನೋಡಿಕೊಳ್ಳುತ್ತಿದ್ದ ಪೂಜ್ಯ ಬ್ರಹ್ಮಾನಂದರಿಂದ ಕರೆಬಂತು. ನಾರಾಯಣ ಭಗವಾನರ ನಿರ್ವಾಣದ ನಂತರ ಆನಂದವನದ ಆಗು ಹೋಗುಗಳನ್ನೆಲ್ಲ ಬ್ರಹ್ಮಾನಂದರೇ (ಪೂರ್ವಾಶ್ರಮದ ಶ್ರೀ ಶ್ರೀನಿವಾಸ ಶಾಸ್ತ್ರಿಗಳು) ನೋಡಿಕೊಳ್ಳುತ್ತಿದ್ದರು ಎನ್.ಸಿ. ದೇಸಾಯಿಯವರು ಅವರಲ್ಲಿಗೆ ಹೋದರು ಧಣೇರ ಸಾಗರದ ಮಠದಲ್ಲಿ ಇರಿಸಲು ದೊಡ್ಡ ಸ್ವಾಮಿ ಹಾಗೂ ನಾರಾಯಣ ಭಗವಾನರ ಎರಡು ತೈಲಚಿತ್ರಗಳು ಬೇಕು, ಆ ಕಾರ್ಯ ತಮ್ಮಿಂದ ಆಗಬೇಕು ಎಂದು ಹೇಳಿದರು. ನಿಜ ಚಿತ್ರಗಳನ್ನು ಮಾಡಿದ್ದರು. ಆದರೆ ತೈಲ ಚಿತ್ರಗಳನ್ನು ಇದುವರೆಗೆ ಮಾಡಿರಲಿಲ್ಲ. ಅವರ ಚಿಕ್ಕಪ್ಪ ಲಿಂಗನಗೌಡರು ಮೈಸೂರಿಂದ ಮರಳಿ ತಂದ ಸಲಕರಣೆ ಬರುವದಕ್ಕೂ ಬ್ರಹ್ಮಾನಂದರ ಬೇಡಿಕೆ ಬರುವುದಕ್ಕೂ ಸಮವಾಯಿತು. ತೈಲ ಚಿತ್ರಗಳಿಗೆ ವರ್ಣ ಮತ್ತಿತರ ಸಲಕರಣೆಗಳೇನೂ ಸೇರಿದ್ದವು ಕ್ಯಾನವಾಸ ಇರಲಿಲ್ಲ, ಕ್ಯಾನವಾಸ ತಯಾರಿಸಿಕೊಂಡು ಚಿತ್ರಗಳನ್ನು ಮಾಡಿದರು.

ಬ್ರಹ್ಮಾನಂದರು ಮೂಲತಃ ಭಾರಂಗಿಯತವರು. ಆ ಊರು ಲಿಂಗನ ಮಕ್ಕಿಯ ಜಲಾಶಯದಲ್ಲಿ ಮುಳುಗಡೆ ಆಯಿತು. ಅದರಿಂದ ಪರಿಹಾರಧನನ್ನು ಪೂರ್ಣವಾಗಿ ಸಾಗರದಲ್ಲಿ ಹೊಸದಾಗಿ ನಿರ್ಮಿಸಿದ ನಾರಾಯಣಾಶ್ರಮಕ್ಕೇ ವಿನಿಯೋಗಿಸಿದ್ದರು. ಆ ಹೊಸಕಟ್ಟದಲ್ಲಿರಿಸಲು ಈ ಚಿತ್ರಗಳು ಅವರಿಗೆ ಬೇಕಿದ್ದವು. ಎನ್.ಸಿ. ದೇಸಾಯಿಯವರು ಮಾಡಿಕೊಟ್ಟ ಅವರ ಚಿತ್ರಗಳೇ ಇಂದಿಗೂ ಅಲ್ಲಿ ಇವೆ.

ಹಾವೇರಿಯ ಶಂಕ್ರಪ್ಪ ಮೋಟೆಬೆನ್ನೂರ ಇವರು ಅಕ್ಕಸಾಲಿಗರು, ವಿಶ್ವಕರ್ಮದ ಜನಾಂಗದವರಿಗೆ ಕಲೆ ನೈಸರ್ಗಿಕವಾಗಿಯೇ ಬೆಳ್ಳಿ ಬಂಗಾರದ ವಸ್ತುಗಳಲ್ಲದೆ ಗಣಪತಿ ಮಾಡುವದು, ಚಿತ್ರ ಬರೆಯುವ ಮುಂತಾದ ಕುಶಲ ಕಲೆ ಅವರಿಗೆ ಸಹಜವಾಗಿಯೇ ಕೈಗೂಡಿರುತ್ತದೆ. ಶಂಕ್ರಪ್ಪನಿಗೆ ಅಂಥ ಕಲೆ ಹಸ್ತಗತವಾಗಿತ್ತು ಅವರ ತಂದೆಯ ಕಸುಬನ್ನು ಮುಂದುವರಿಸಲಿಲ್ಲ ವಿಶ್ವಕರ್ಮಕ್ಕೆ ಸಂಬಂಧಿಸಿದ ಏನೇನೋ ಕೆಲಸಗಳನ್ನು ಮಾಡುವಲ್ಲಿ ಅವನು ತಲ್ಲೀನನಾಗಿರುತ್ತಿದ್ದ.

ಶಂಕ್ರಪ್ಪನು ಮನೆಯಲ್ಲಿದ್ದಾಗ ಫ್ರೆಟ್‌ವರ್ಕ್ ಮಾಡುತಿದ್ದನು ಫ್ರೆಟ್‌ವರ್ಕ ಅಂದರೆ ಪ್ಲೈವುಡ್ಡನಲ್ಲಿ ನಕ್ಷೆ ಕೊರೆಯುವುದು. ಶಂಕ್ರಪ್ಪನಿಗೆ ನಕ್ಷೆಗಳನ್ನು ತಯಾರಿಸುವವರು ಬೇಕೆಂದು ಅಳತೆಗೆ ಕೈಯಿಂದಲೆ ಮಾಡಿಕೊಳ್ಳಬೇಕಾಗುತ್ತಿತ್ತು. ಆ ಸಹಾಯ ಜರೂರಿ ಶಂಕ್ರಪ್ಪನಿಗಿತ್ತು. ಆಗ ಎನ್.ಸಿ.ದೇಸಾಯಿಯವರ ಬಗ್ಗೆ ಆ ಊರಿಗೆ ಹೋಗಿ ಅವರ ಕೆಲ ಚಿತ್ರಗಳನ್ನು ನೋಡಿದರು ನಂತರ ತಾವೂ ಆ ಚಿಕ್ಕ ನಕ್ಷೆಯ ಕ್ಯಾಟಲಾಗ್ ಕೊಡ ತೋರಿಸಿದರು. ಅವುಗಳ ನಕ್ಷೆ ಸಿದ್ದ ಮಾಡಿಕೊಂಡು ಬಂದರು. ಅದನ್ನು ನೋಡಿ ಖುಷಿಯಾಯಿತು ಅಂಥ ನಕ್ಷೆಗಳು ಹೆಚ್ಚಾಗಿ ಪೋಟೋ ಫ್ರೇಮ್‌ಗಳೇ ಆಗಿದ್ದವು ಹಾಗೆ ಅವರು ಹೊಸ ಹೊಸ ನಕ್ಷೆ ತರುತ್ತಲೇ ಹೋದರು ಎನ್.ಸಿ.ದೇಸಾಯಿಯವರ ಮಾಡಿಕೊಡುತ್ತಲೇ ಹೋದರು ಈ ಕೆಲಸದ ಚಾರ್ಜಿಸ್ ಬಗ್ಗೆ ಅವರೂ ಕೇಳಲಿಲ್ಲ. ಇವರೂ ಕೂಡ ಪ್ರಸ್ತಾಪ ಮಾಡಲಿಲ್ಲ. ಬಹುಕಾಲ ಹೀಗೇ ನಡೆಯಿತು. ಒಂದು ದಿನ ಶಂಕ್ರಪ್ಪ ಮೋಟೆಬೆನ್ನೂರ ಬರುವಾಗ ಹಳೇ ತರದ ಕ್ಯಾಮರಾ ತಂದು ಮನೆಯಲ್ಲೇನೊ ಇಟ್ಟರು. ಹಾವೇರಿಯಿಂದ ಅದಕ್ಕೆ ಬೇಕಾಗುವ ಪ್ಲೇಟ್, ಔಷಧ, ಕೆಮಿಕಲ್ ತಂದು ಪ್ರಯೋಗ ಮಾಡಿದ್ದೂ ಆಯಿತು. ಅದು ಯಶಸ್ವಿಯೂ ಆಯಿತು. ಹೇಗೆ ಕೆಲಕಾಲ ಆ ಕ್ಯಾಮರಾ ಎನ್.ಸಿ.ದೇಸಾಯಿಯವರಲ್ಲಿ ಉಳಿಯಿತು. ಫೋಟೋಗ್ರಾಫಿಯ ವಿಷಯದ ಮಾಹಿತಿಯನ್ನು ಹಾವೇರಿ ಹೈಸ್ಕೂಲಿನಲ್ಲಿದ್ದ ಡ್ರಾಯಿಂಗ್ ಮಾಸ್ತರರಾಗಿ ಗುಡಿಸಾಗರರಿಂದಲೇ ಪಡೆದಿದ್ದರು.

**ಮುಂಬೈಗೆ ಆಮಂತ್ರಣ**

ಮುಂದೆ ಶಂಕ್ರಪ್ಪ ಮೋಟೆಬೆನ್ನೂರ ಕಲಾ ಶಿಕ್ಷಣ ಪಡೆಯಲು ಮುಂಬೈಗೆ ಹೋದರು. ಮುಂಬೈಗೆ ತೆರಳಿದ ನಂತರ ಶಂಕ್ರಪ್ಪನ ಮೊದಲ ಕಾಗದ ದೇಸಾಯಿಯವರ ಕೈ ಸೇರಿತು. ಆ ಕಾಗದದಲ್ಲಿ ಹೆಚ್ಚಿನ ವಿಷಯವನ್ನೇನು ಬರೆದಿರಲಿಲ್ಲ. ಮುಂಬೈಯ ವಾಸ್ತವ್ಯ ತೊಂದರೆ ಓಡಾಡುವ ಪ್ರಾಯ ದಿನದ ಖರ್ಚು ಮುಂತಾದ ವಿಷಯಗಳನ್ನೇ ಹೆಚ್ಚಾಗಿ ತಿಳಿಸಿದ್ದರು "ಧೋಬಿತರಾವ" ಹತ್ತಿರವಿದ್ದ ವಸಂತ ಭವನದ ಡಾರ್ಮೆಟರಿಯಲ್ಲಿ ಸಧ್ಯ ವಾಸವಾಗಿರುವುದಾಗಿ ತಿಳಿಸಿದ್ದರು.

ಇವರು ಎನ್.ಸಿ.ದೇಸಾಯಿಯವರ ಬಾಲ್ಯ ಸ್ನೇಹಿತರಾಗಿದ್ದರು. ಇವರು ಮುಂಬೈಗೆ ಕೆಲಸಕ್ಕಾಗಿ ಹೋಗಿದ್ದರು. ಶಂಕ್ರಪ್ಪ ಅವರಿಗೆ ಸೋಮಣ್ಣ ವಿಳಾಸವನ್ನೂ ಕೊಟ್ಟರು ಅವರೀರ್ವರಿಗೂ ಪರಸ್ಪರ ಪರಿಚಯವಿತ್ತು. ಸೋಮಣ್ಣನನ್ನು ಒಮ್ಮೆ ಭೆಟ್ಟಿಯಾಗಿ ಬಂದ ವಿಷಯವನ್ನು ಶಂಕ್ರಪ್ಪ ಎನ್.ಸಿ.ದೇಸಾಯಿಯರಿಗೆ ಒಂದು ಪತ್ರದಲ್ಲಿ ಬರೆದಿದ್ದರು. ಶಂಕ್ರಪ್ಪ ಮುಂಬೈಯಲ್ಲಿ ಅವರು ಕಲಿಯ ಬೇಕಾದ ಕ್ರಾಫ್ಟ್ ಕಲಿಸುವುದನ್ನು ಶೋಧಿಸಿ ಅಲ್ಲಿ ಸೇರಿದನಂತರ ಅದರ ವಿವರ ನೀಡುವ ಪತ್ರಬಂತು ಅಲ್ಲದೆ ಚಿತ್ರಕಲೆಗೆ ಮುಂಬೈಯಲ್ಲಿ ಎಷ್ಟು ಬೇಡಿಕೆಯಿದೆ, ಎಷ್ಟು ಮಹತ್ವವಿದೆ ಎಂಬ ವಿವರವನ್ನು ನೀಡಿದ್ದರು. ದಿನಕಳೆದಂತೆ ಜನರ ಪರಿಚಯ ಹೆಚ್ಚುತ್ತ ಹೋಗುವದು ಸಹಜ ಹಾಗು ಬೇರೆ ಬೇರೆ ಕ್ಷೇತ್ರಗಳಲ್ಲಿರುವವರ ಸಂಪರ್ಕ ಬರುವುದು ಸಹಜ. ಇವರು ಇದ್ದ ಹೋಟೆಲ್‌ನಲ್ಲಿಯೆ ಕನ್ನಡಿಗರೊಬ್ಬರು ಒಂದು ಜಾಹೀರಾತು ಕಂಪನಿಯಲ್ಲಿ ಕೆಲಸ

ಮಾಧುನವರು ದೇಶಪಾಂಡೆ ಎಂದು ಅವರ ಹೆಸರು. ಅವರ ಪರಿಚಯದ ವಿಷಯ ಬರೆಯುತ್ತ, ನಿಮ್ಮಂಥವರು ಮುಂಬಯಿಗೆ ಕೆಲಸ ಸಿಗಲು ತೊಂದರೆಯಾಗಲಾರದ ಎಂದು ಅವರು ಹೇಳಿದ್ದಾರೆಂದು ಬರೆದಿತ್ತು. ಎಸ್.ಸಿ.ದೇಸಾಯಿಯವರೆ ಮುಂಬೈಗೆ ಒಮ್ಮೆ ಬಂದು ಹೋಗಬಾರದೆ ಎಂದೂ ಸೂಚಿಸಿದ್ದರು "ಈ ಪತ್ರ ನನ್ನನ್ನು ಮುಂಬೈಗೆ ಆಮಂತ್ರಿಸುವ ಪೀಠಿಕೆಯ ಪತ್ರವಾಯಿತು" ಎಂದು ಡೈರಿಯಲ್ಲಿ ವಿವರಿಸಿದ್ದಾರೆ.

ಮುಂದಿನ ಪತ್ರದಲ್ಲಿ ದೇಶಪಾಂಡೆಯವರು ನಿಮಗೆ ನೌಕರಿ ನೊಡಿಬಿಟ್ಟಿದ್ದಾರೆ ಎಂದೂ ತಿಳಿಸಿದ್ದರು ಈ ರೀತಿಯಾಗಿ ಎಸ್.ಸಿ.ದೇಸಾಯಿಯವರು ಪ್ರತಿ ಪತ್ರದಿಂದ ಅವರಿಗೆ ಮುಂಬೈಗೆ ಹೋಗಬೇಕು ಎಂಬ ಸೂಚನೇ ಇದ್ದೆ ಇರುತ್ತಿತ್ತು. ಅದಕ್ಕೆ ಕಾರಣ ದಿನ ದಿನಕ್ಕೆ ಹೆಚ್ಚುತ್ತಿರುವ ಮುಂಬೈ ಸಂಪರ್ಕ ಅಲ್ಲಿ ಕಲಾವಿದರ ಅವಶ್ಯಕತೆ ಅದರಲ್ಲೂ ಇವರಂಥ ಆಲ್‌ರೌಂಡರ್ ಕಲಾವಿದರಾಗಿರುವ ಕೆಲಸಗಳ ಅನುಕೂಲತೆ ಇವೆಲ್ಲ ಶಂಕ್ರಪ್ಪ ಅವರನ್ನು ಆಕರ್ಷಿಸಿದ್ದರೆ ತಪ್ಪಲ್ಲ. ಅವರಿಗೆ ಎಸ್.ಸಿ.ದೇಸಾಯಿಯರ ಬಗ್ಗೆ ಅಷ್ಟೊಂದು ಕಳಕಳಿಯಾಗಿತ್ತು. ಒಮ್ಮೆಯಾದರೂ ಮುಂಬೈಗೆ ಬನ್ನಿ ಎಂದೂ ಅವರ ಭಿನ್ನಹವಾಗಿತ್ತು.

ಶಂಕ್ರಪ್ಪರ ಒತ್ತಾಯ ಎಸ್.ಸಿ.ದೇಸಾಯಿಯ ಮನಸ್ಸಿನ ಮೇಲೆ ಪರಿಣಾಮ ಮೂಡತೊಡಗಿತು. ಇಷ್ಟೊಂದು ಕಳಕಳಿಯಿಂದ ಅವರು ಕರೆಯುತ್ತಿದ್ದಾರೆ, ಒಮ್ಮೆ ಏಕೆ ಹೋಗಿ ಬರಬಾರದು ಎಂಬ ವಿಚಾರ ಸುಳಿಯ ತೊಡಗಿತು. ಈ ಮಧ್ಯ ಮತ್ತೊಂದು ಪತ್ರ ಬಂತು. ಅದರಲ್ಲಿ ಕೆ.ಫ್.ಪಾಟೀಲರು ಕುಟುಂಬ ಸಮೇತ ಮನೆಯನ್ನು ಪೂಣೆಗೆ ಬದಲಾಯಿಸಿದ್ದರು. ಅವರ ಮನಿ ಖಾಲಿಯಿದ್ದುದರಿಂದ ನಾವು ಒಟ್ಟಿಗೆ ಕೆಲ ಕಾಲ ಅಲ್ಲಿ ತಂಗಲು ಅನುಕೂಲವಿದೆ ಇದೊಂದು ಉತ್ತಮ ಸಂಧಿ ನೀವು ಬೇಗ ಬನ್ನಿ ಎಂಬ ಒತ್ತಾಯವು ಬಂತು. ಸೋಮಣ್ಣಾ ಕೆಲದಿನಗಳ ರಜೆಯ ಮೇಲೆ ಬರುವದಾಗಿ ತಿಳಿಸಿದರು ಶಂಕ್ರಪ್ಪನಿಗೆ ವಿಷಯ ತಿಳಿಯುತ್ತಲೇ ಮರಳಿ ಬರುವಾಗ ಎಸ್.ಸಿ.ದೇಸಾಯಿಯರನ್ನು ಕರೆದುಕೊಂಡೇ ಬರಬೇಕೆಂದು ತಾಕೀತು ಕೂಡ ಮಾಡಿದ್ದ ಅಲ್ಲದೆ ವಿಷಯವನ್ನು ಅವರ ತಂದೆಯವರಿಗೂ ತಿಳಿಸಲೂ ಅವರ ಒಪ್ಪುವಂತೆ ಮಾಡಲೂ ಹೇಳಿದ್ದರು. ಶಂಕ್ರಪ್ಪನಿಗೆ ಗೊತ್ತಿತ್ತು ಸೋಮಣ್ಣಾ ತಂದೆಯವರಿಗೆ ಏನೆಂದರೂ ಸೂಚನೇ ಮಾಡಿದರೆ ಅದನ್ನು ಅವರು ನಿರಾಕರಿಸುವದಿಲ್ಲವೆಂದು ಈ ವಿಷಯದ ಪತ್ರ ಎಸ್.ಸಿ.ದೇಸಾಯಿಯವರು ಮುಂಬಯಿಗೆ ಒಮ್ಮೆಯಾದರೂ ಹೋಗಬೇಕೆಂದು ಮಿಂಚಿದ ವಿಷಯಕ್ಕೆ ಈ ರೆಕ್ಕೆ ಪುಕ್ಕಗಳು ಬೆಳೆದವು. ಸೋಮಣ್ಣಾ ಬರಲಿ ನೋಡೋಣವೆಂದು ಸಮಾಧಾನ ಮಾಡಿಕೊಂಡರು.

ಆಗ ಎಸ್.ಸಿ.ದೇಸಾಯಿಯವರ ಪತ್ನಿ ಇದೇ ಸಮಯದಲ್ಲಿ ಚೊಚ್ಚಲ ಬಸುರಿ ಎಂದರೆ ತವರಿಗೆ ಹೋಗುವುದು. ಅವರು ಬಸುರಿ ಎಂದು ಗೊತ್ತಾಗುವದೇ ತಡ ೭ ನೇ ತಿಂಗಳಲ್ಲಿ "ಕಳ್ಳಕುಬುಸ" ಎಂದು ಮಾಡಿದರು ೯ ನೇ ತಿಂಗಳು ತೌರುಮನೆಯವರು ಬಸುರಿಯನ್ನು ಕರೆದು ಕುಬುಸವೊ ಸೀರೆ ಯಾವುದೇ ಮಾಡಬೇಕು ನಂತರವೇ ಯಾರು ಬೇಕಾದರು ಆಮಂತ್ರಿಸಿ ಕುಬಸ ಮಾಡಬಹುದು ಇನ್ನು ಅತ್ತೆ ಮನೆಯವರು ಮಾಡುವ ಈ ಕಾರ್ಯಕ್ರಮ "ಸೀಮಂತ" ಎನ್ನುತ್ತಾರೆ. ಈ ಎಲ್ಲ ಧಾರ್ಮಿಕ ಸಾಮಾಜಿಕ ಕಾರ್ಯಗಳೆಲ್ಲ

ಸಾಧ್ಯಾಂತವಾಗಿ ನಡೆದವು. ಎನ್.ಸಿ.ದೇಸಾಯಿಯವರ ಹೆಂಡತಿ ತವರುಮನೆ ಚಿಕ್ಕದು. ಬಾಣಂತನಕ್ಕೆ ಯಾವ ಹೆರಿಗೆ ಆಸ್ಪತ್ರೆಗೂ ಹೆಸರನ್ನು ನೊಂದಾಯಿಸಿರಲಿಲ್ಲ. ೧೯೪೮ ಗೋಕುಲಾಷ್ಟಮಿಯ ದಿನ ಹೆರಿಗೆ ಆಯಿತು. ಎನ್.ಸಿ.ದೇಸಾಯಿಯವರ ತಂದೆ ತಾಯಿ ಬಂದು ಮೊಮ್ಮಗನನ್ನು ನೋಡಿಕೊಂಡು ಹೋದರು ಗೋಕುಲಾಷ್ಟಮಿಯ ದಿನ ಹುಟ್ಟಿದವನಂದು ಅವನಿಗೆ 'ಕೃಷ್ಣ' ಎಂಬ ನಾಮಕರಣ ಮಾಡಿ ಪ್ರೀತಿಯಿಂದ 'ಬಾಳ್' ಎಂದು ಕರೆಯುತ್ತಿದ್ದರು. ರೂಢಿಯಲ್ಲಿ ಅವನನ್ನು ಎಲ್ಲರೂ 'ಬಾಳ್' ಎಂದೇ ಕರೆದರು.

ಈ ಮಧ್ಯ ಸೋಮಣ್ಣಾ ಯೋಜಿಸಿಕೊಂಡ ಹಾಗೆ ರಜೆ ಪಡೆದ ಊರಿಗೆ ಬಂದನು ಆ ಸಮಯಕ್ಕಾಗಲೇ ಎನ್.ಸಿ.ದೇಸಾಯಿಯವರು ಮುಂಬೈಗೆ ಹೋಗುವ ಬಗ್ಗೆ ವಿಚಾರಿಸಿದ್ದರು ಒಮ್ಮೆ ಹೋಗಿ ಬರುವದೆಂಬ ವಿಚಾರದಿಂದಲೇ ಸಿದ್ಧತೆ ಮಾಡಿಕೊಂಡಿದ್ದರು ಅವರ ತಂದೆಯವರ ಪರವಾನಗಿಯೂ ಹಾಗು ೫೦ ಐವತ್ತು ರೂಪಾಯಿಗಳು ಕೂಡ ಅವರ ಕೈ ಸೇರಿದ್ದವು ಆಗ ಅವರು ಪೂರ್ಣ ವಿಚಾರ ಮಾಡಲಿಲ್ಲ ೫೦ ರೂಪಾಯಿಗಳು ಸಾಕಾದೀತು? ಎಂದು ಅಂತೂ ಹೊರಡುವ ನಿರ್ಧಾರವಾಗಿತ್ತು ಸೋಮಣ್ಣಾ ಮರಳುವ ದಿನವನ್ನು ನಿಶ್ಚಯಮಾಡಿಕೊಂಡೇ ಬಂದಿದ್ದ. ಎನ್.ಸಿ. ದೇಸಾಯಿಯವರ ತಂದೆ ಅನಂತನ ವ್ರತ ಮಾಡುತ್ತಿದ್ದರು. ಆ ವಿಷಯ ಸೋಮಣ್ಣಾನಿಗೂ ಗೊತ್ತಿತ್ತು. ಅನಂತನ ಚತುರ್ದಶಿಯ ಪೂಜೆ ಮುಗಿಸಿಕೊಂಡು ಊಟವಾದ ತಕ್ಷಣ ಹೊರಡುವದೆಂದು ಅವರ ನಿರ್ಧಾರವಾಗಿತ್ತು.

ಎನ್.ಸಿ.ದೇಸಾಯಿಯ ಪ್ರಯಾಣ ಅಗಡಿಯಿಂದ ಹಾವೇರಿಗೆ ಹೋಗಿ ಅಲ್ಲಿ ರೈಲು ಹಿಡಿಯಬೇಕು. ಮಧ್ಯ ಪುಣೆಯಲ್ಲಿ ಟ್ರೇನು ಬದಲಾಯಿಸಬೇಕು. ಈಗಿನಂತೆ ಆಗ ಸ್ಲೀಪರ್ ಕೋಚ್ ಮುಂತಾದವುಗಳೇನು ಇರಲಿಲ್ಲ ೨೦೦ ಮೈಲಿಗಿಂತ ಹೆಚ್ಚು ಪ್ರವಾಸ ಮಾಡುವವರಿಗೆ ಒಂದು ಪ್ರತ್ಯೇಕ ಬೋಗಿ ಮಾತ್ರ ಇರುತ್ತಿತ್ತು. ಅದು ಹೆಸರಿಗೆ ಮಾತ್ರ ಉಳಿದ ಬೋಗಿಗಳಿಕ್ಕಿಂತ ಹೆಚ್ಚು ತುಂಬಿರುತಿತ್ತು ಆಗ ಮುಂಬೈಯ ಪ್ರವಾಸ ನರಕವೇ ಎನಿಸಿತ್ತು.

ಅಂತೂ ದಾದರ ತಲುಪಿದರು ಮಧ್ಯಾಹ್ನದ ಊಟವನ್ನು ಮನೆಯಲ್ಲಿಯೇ ಮಾಡಿದರು. ದಾದರಿನಿಂದ ಹಮಾಲಿಯ ಮೇಲೆ ಟ್ರಂಕು ಹೊರಿಸಿಕೊಂಡೇ ಮನೆಗೆ ಹೋದರು. ಮೊದಲು ನೇರ ಹೋದದ್ದು ಕರ್ಪೂರ ಗಣಪ್ಪನ ಮನೆಗೆ ಅಂದರೆ ಸೋಮಣ್ಣಾನ ಅಕ್ಕನ ಮನೆಗೆ ಎನ್.ಸಿ.ದೇಸಾಯಿಯವರ ಪ್ರಥಮವಾಗಿ ಕಾಲಿಟ್ಟದ್ದು ಕರ್ಪೂರರ ಮನೆಯಲ್ಲಿ ಇದು ಮುಂಬೈಯಿಗೆ ನನ್ನದು ಪ್ರಥಮ ದರ್ಶನ ಇದುವರೆಗೆ ಇಷ್ಟು ಎತ್ತರದ ಮನೆಗಳನ್ನು ನಾನು ನೋಡಿರಲಿಲ್ಲ ಅಷ್ಟು ಬಸ್ಸುಕಾರುಗಳನ್ನು ಕಂಡಿರಲಿಲ್ಲ ಆನಂದವಾಯಿತು ಎಂದು ತಮ್ಮ ಭಾವನೆಗಳನ್ನು ಡೈರಿಯಲಿ ವ್ಯಕ್ತಪಡಿಸಿದ್ದರು.

ತಾವು ಮುಂಬೈಗೆ ಬರುವ ವಿಷಯವನ್ನು ಶಂಕ್ರಪ್ಪನಿಗೆ ಮೊದಲೇ ತಿಳಿಸಿದ್ದರು. ಈ ಮೊದಲೆ ಎನ್.ಸಿ.ದೇಸಾಯಿಯವರ ಮಾಮ ಮುಂಬೈ ಸೇರಿಯಾಗಿತ್ತು. State Bankನಲ್ಲಿ ನೌಕರಿ ಇರುವದು ಮಾತುಂಗದಲ್ಲಿ ಅವರ ಅಕ್ಕನ ಮನೆಯಲ್ಲಿ ಅಂದರೆ ಎನ್.ಸಿ.ದೇಸಾಯಿಯ ಎನ್.ಸಿ.ದೇಸಾಯಿಯರ

ಚಿಕ್ಕಮ್ಮ ಇರುತ್ತಿದ್ದರು. ಅವರಿಗೂ ಎಸ್.ಸಿ.ದೇಸಾಯಿಯವರು ಮುಂಬೈಗೆ ಬರುವುದನ್ನು ತಿಳಿಸಿಯಾಗಿತ್ತು.

ಹೋದ ದಿನವೇ ಸಾಯಂಕಾಲ ಶಂಕ್ರಪ್ಪರನ್ನು ಸಂದರ್ಶಿಸಿದರು ಮರುದಿನ ಅವರು ತಾವು ಪಾಠ ಕಲಿಯುತ್ತಿದ ಶಾಲೆಯನ್ನು ತೋರಿಸುವುದಲ್ಲದೇ ಅಲ್ಲಿಗೆ ಎಸ್.ಸಿ.ದೇಸಾಯಿಯರನ್ನು ನೌಕರಿ ಕೊಡಿಸುವುದಾಗಿ ಹೇಳಿದವರನ್ನು ಭೆಟ್ಟಿ ಮಾಡಿಸುವುದಾಗಿ ತಿಳಿಸಿದರು. ದೇಶಪಾಂಡೆಯವರು Times of Indiaದಲ್ಲಿ ಪ್ರಕಟವಾಗುತ್ತಿದ್ದ Classifide Advtನಲ್ಲಿ ಹುಡುಕಿ ಒಂದು ಜಾಹೀರಾತನ್ನು ಆರಿಸಿ ಇಟ್ಟಿದ. ಚಿತ್ರಕಲಾವಿದ ಬೇಕೆಂಬುದನ್ನು ತಿಳಿಸುವುದು. ಆ ಜಾಹೀರಾತು ದೇಶಪಾಂಡೆಯವರು ಎಸ್.ಸಿ.ದೇಸಾಯಿಯರನ್ನು ಅಲ್ಲಿಗೆ ಕರೆದುಕೊಂಡು ಹೋದರು ಅದೊಂದು Film Prodncing Co., ಅದರ ಹೆಸರು "Indian National" ಎಂದು ಆ ಕಂಪನಿಯ ಹೆಸರು ಅದೇ 'ಡಾಕ್ ಬಂಗಲೊ' ಎಂಬ ಚಿತ್ರವನ್ನು ತಯಾರಿಸಿದ್ದರು. ಆ ಕಂಪನಿಯ ಕ್ಯಾಮರಾಮನ್ ಹೆಸರು ಮೇಜರ್ ಮಾಟ್ಜನರ್. ಜರ್ಮನ್ ಜ್ಯೂ ಇದ್ದನು ಸಧ್ಯ ಚಿತ್ರ ತಯಾರಿಕೆ ಇಲ್ಲದ್ದರಿಂದ ಅಂತಿಂಥ ಜಾಹೀರಾತು ಕೆಲಸ ಮಾಡುತ್ತಿದ್ದರೆಂದು ಕಾಣುತ್ತದೆ. Atatrai ಹಾಗು ಜಯನಂದಾ ಖೀರಾ ಅಲ್ಲದೇ ಇನ್ನು ಕೆಲ ಚಿಕ್ಕ ಕಂಪನಿಗಳ ಜಾಹೀರಾತು ಮಾಡುತ್ತಿದ್ದರು.

ಬಹುಶಃ ಇದೆ ಸಮಯದಲ್ಲಿಯ ಶಂಕ್ರಪ್ಪ ಜೊತೆ ಕೆ.ಎಫ್.ಪಾಟೀಲರ ಮನೆಗೆ ಇರಲು ಹೋದರು. ಅವಶ್ಯವಿದ್ದ ಒಂದೆರಡು ಬಟ್ಟೆಗಳನ್ನು ಬಕಲಪ್ಪನ ಮನೆಯಿಂದ ಕೈ ಚೀಲದಲ್ಲಿ ತೆಗೆದುಕೊಂಡು ಹೋಗಿದ್ದ ಕೆ.ಎಫ್.ಪಾಟೀಲರಿಗೆ ಕೊಟ್ಟ, ಕ್ವಾರ್ಟರ್ ಮರೀನ ಲೈನ್ಸ್ ಸ್ಟೇಷನ್ ಪಕ್ಕದಲ್ಲಿಯೇ ಇತ್ತು. ಚಂದಮನೆ ಲಿಫ್ಟ್‌ಕೂಡ ಇತ್ತು.ಆ ಕಂಪನಿಯು ಕೊಲಾಬಾದಲ್ಲಿ ತಾಜಮಹಲ ಹೋಟೆಲ್ ಪಕ್ಕದಲ್ಲಿತ್ತು ಟಿಲಕ್ ರೋಡ್ ನ್ಯಾಶನಲ್ ಹೌಸನಲ್ಲಿತ್ತು. ಆ ಕಂಪನಿಯಲ್ಲಿ ಬಹಳದಿನ ಕೆಲಸ ಮಾಡಲಿಲ್ಲ ಮೆಜರ್ ಮಾಟ್ಜನಿಗೂ ಕಂಪನಿ ವ್ಯವಸ್ಥಾಪಕರಿಗೂ ಏನೋ ಜಗಳ ಬಂತು. ಮ್ಯಾಟ್ಜರನೆ ಹೊರಬಂದು ಆದರೆ ಅವನು ಎಸ್.ಸಿ.ದೇಸಾಯಿಯರ ಕೈ ಬಿಡಲಿಲ್ಲ ಅವನ ಮನೆ ಜುಹುದಲ್ಲಿ ಎಂಬಲ್ಲಿತ್ತು. ಅವನ ಪತ್ನಿ ಕರ್ನಾಟಕ ಕ್ರಿಸ್ಚಿಯನ್ ಜಾತಿಗೆ ಸಂಬಂಧಿಸಿದವಳು. Plmgrowದಲ್ಲಿ ಒಂದು ಗುಡಿಸಿಲಿನತರ ಅವರ ಮನೆ ಎಸ್.ಸಿ.ದೇಸಾಯಿಯವರು ಕೆಲಸಕ್ಕಾಗಿ ಅಲ್ಲಿಗೆ ಹೋಗಬೇಕಿತ್ತು ಹಾಗು ಹೀಗೂ ಕೆಲಸ ನಡೆದಿತ್ತು ಕೆಲ ತಿಂಗಳು ಮಾತ್ರ

**ಕಲಾಶಿಕ್ಷಣ**

ಈ ಮಧ್ಯ ಮುಂಬೈಯಲ್ಲಿ ಶಂಕ್ರಪ್ಪ ಅವರು ಎಸ್.ಸಿ.ದೇಸಾಯಿಯವರನ್ನು ಕರೆದುಕೊಂಡು ತಿರುಗಾಡಿಸಿದರು ಈ ತಿರುಗಾಟದಲ್ಲಿ ಮುಖ್ಯವಾಗಿ ಕಲಾಗುರು ದಂಡಾವಲಿ ಮಠದ ನೂತನ ಕಲಾ ಮಂದಿರವನ್ನು ಕಾಣುವದು ಮುಖ್ಯವಾಗಿತ್ತು ಅಲ್ಲಿ ಎಸ್.ಸಿ.ದೇಸಾಯಿಯವರ ಭವಿಷ್ಯದ ವಿಷಯವಾಗಿ ನಿರ್ಧರಿಸುವ ಕಾರ್ಯ ಮುಖ್ಯವಾಗಿತ್ತು. ಅಗ್ಗ ಬಿಟ್ಟು ಸೋಮಣ್ಣನ ಜೊತೆ ಮುಂಬೈಗೆ ಹೊರಟಾಗ ಇಂತಹದೇ ಕಾರ್ಯ ಮಾಡ ಬೇಕು ಕಲಾಭ್ಯಾಸವನ್ನು ಮುಂದೊರಿಸಬೇಕು ಎಂಬ ಮುಂತಾದ ಯಾವ

ನಿರ್ಧಾರವನ್ನು ಮಾಡಿರಲಿಲ್ಲ ಅಂದು ಅವರ ತಿಳುವಳಿಕೆ ಪ್ರಕಾರ ಕಲಾಶಾಲೆಯನ್ನು ಸೇರಲು ಕೂಡ ಕನಿಷ್ಟ ಮೆಟ್ರಿಕ್ ಪರಿಕ್ಷೆಯಾಗಿರಬೇಕು ಎಂಬ ಕಲ್ಪನೆಯಿತ್ತು. ಅಂತೂ ನೂತನ ಕಲಾಮಂದಿರಕ್ಕೆ ಹೋದರು. ಆ ಶಾಲೆಯ ಪೇರಾ ಹೌಸ ಭಾಗದಲ್ಲಿ "ಬ್ಲವಸ್ಕಿಲಾಜ" ಎಂಬ ಕಟ್ಟಡದ ಎರಡನೆಯ ಮಾಳಿಗೆ ಮೇಲಿತ್ತು. ಆ ಕಟ್ಟಡ ಥಿಯೋಸೋಫಿಕಲ್ ಸೊಸೈಟಿಯವ ಮಾಲೀಕದಲ್ಲಿತ್ತು.

ಶಂಕ್ರಪ್ಪ ಎನ್.ಸಿ.ದೇಸಾಯಿಯವರನ್ನು ಅಲ್ಲಿ ಕರಕೊಂಡ ಹೋದರು ಗುರುಗಳಿಗೆ ನಮಿಸಿ ಅವರ ಇಚ್ಛೆ ಚಿತ್ರಕಲಾಭ್ಯಾಸವನ್ನು ಮಾಡಬೇಕೆಂದು ಉದ್ದೇಶವನ್ನು ಹೊಂದಿದ್ದರು ಹಾಗು ಅವರದು ಮೆಟ್ರಿಕ್ ಪರೀಕ್ಷೆ ಆಗಿಲಿ ಕಲೆಯಬೇಕೆಂಬ ಇಚ್ಛೆಯೆನೋ ಇದೆ ಎಂದ ಗುರುಗಳಿಗೆ ತಿಳಿಸಿದರು. ಕಲಾ ಗುರುಗಳಾದ ದಂಡಾವತಿಮಠ ಅವರು ಎನ್.ಸಿ.ದೇಸಾಯಿಯವರ ಕಲ್ಪನೆಯನ್ನು ಕಿತ್ತೊಗೆದರು ಮೆಟ್ರಿಕ್ ಆಗಿರಲೇಬೇಕೆಂಬ ಕಟ್ಟಳೇ ಏನು ಇಲ್ಲ. ನೀನು ಚಿತ್ರಿಸಿದ ಕೆಲ ಚಿತ್ರಗಳನ್ನು J.J. School of Artಗೆ ಕಳಿಸಬೇಕು. ಅವುಗಳನ್ನು ನೋಡಿ ವಿದ್ಯಾರ್ಥಿಯ ಅರ್ಹತೆಯನ್ನು ಕೇಳಿ ಎನ್.ಸಿ.ದೇಸಾಯಿಯವರ ಮನಸ್ಸಿಗೊಂದು ನೆಮ್ಮದಿ ಎನಿಸಿತು. ಪ್ರದೇಶಕ್ಕಂತೂ ತೊಂದರೆಯಿಲ್ಲ ಎಂಬ ಭರವಸೆಯಾಯಿತು. ಆಗಿ ಹೋದ ಸಮಯದಲ್ಲಿ ಕೆಲ ಕನ್ನಡ ವಿಧ್ಯಾರ್ಥಿಗಳು ಅಲ್ಲಿ ಅಭ್ಯಾಸ ಮಾಡುತ್ತಿರುವದನ್ನು ಗಮನಿಸಿದರು ಹಾಗೂ ಪ್ರದೇಶದ ಸಮಯಕ್ಕೆ ಫೀ ಮತ್ತು ಸಲಕರಣೆಯ ಬಗ್ಗೆ ಎಷ್ಟು ವೆಚ್ಚವಾಗಬಹುದೆಂಬ ವಿಷಯವನ್ನು ಗುರುಗಳಿಂದ ಕೇಳಿ ತಿಳಿದುಕೊಂಡು ಎನ್.ಸಿ.ದೇಸಾಯಿಯವರ ಹೊರಡುವಾಗಿನ ತೆಗೆದು ಕೊಂಡ ಹೋದ ಮೂಲಧನ ೫೦ ರೂಪಾಯಿಗಳು ತೀರಿ ಹೋಗಿತ್ತು ಅನಂತರ ಅಲ್ಲಲ್ಲಿ ಹೆಚ್ಚಾಗಿ ಮೇಜರ್ ಮ್ಯಾಟ್ಸನರ್ ಹತ್ತಿರ ದುಡಿದ ಹಣದಿಂದಲೇ ದಿನ ಸಾಗಿತ್ತು. ಖರ್ಚು ಎಷ್ಟಾಗಬಹುದೆಂಬುದನ್ನು ಅವರ ತಂದೆಯವರಿಗೆ ಬರೆದು ತಿಳಿಸಿದರು ಹಾಗು ಶಾಲೆಗೆ ಸೇರಬೇಕೆಂಬ ಅವರ ಹಂಬಲವನ್ನು ತಿಳಿಸಿದ್ದರು.

ಮುಂಬೈಯಲ್ಲಿ ಆಗ ಸೋಪಿಕಾಲ ಫಿರೋಜಶಹಾ ಮೆಹತಾ ರೋಡನಲ್ಲಿ ಗೋಪಾಲಾಶ್ರಮ ಎಂಬುದೊಂದು ಹೋಟೆಲ್ ಇತ್ತು ಅಲ್ಲಿ ೫೦ ಪೈಸೆ, ೮ ಆಣೆಗೆ ರೈಸ್ ಪ್ಲೇಟ್ ಊಟ ಸಿಗುತ್ತಿತ್ತು. ಅಷ್ಟು ಕಿಸೆಯಲ್ಲಿ ೮ ಆಣೆ ಇಲ್ಲವೆಂದಾರೆ ಇನ್ನು ಹತ್ತು ಹೆಜ್ಜೆ ಹೆಜ್ಜೆ ಮುಂದೆ ಹೊದರೆ ಇನ್ನೊಂದು ಹೋಟೆಲ್ ಇತ್ತು ಅಲ್ಲಿ ಆರು ಆಣೆಗೆ ಊಟ ಆದರೆ ಅನ್ನದಲ್ಲಿ ಹೆಸರು ಬೇಳೆಯನ್ನು ಬೆರಸುತ್ತಿದ್ದರು. ಇಲ್ಲವಾದರೆ ಉಳಿದದಲ್ಲಿ ಗೋಪಾಲಾಶ್ರಮದೆ ಪದ್ಧತಿ ಅಂದು ರಸ್ತೆಯಲ್ಲಿ ಆರಾಣೆಯೂ ಇಲ್ಲವೆಂದರೆ ಎರಡಾಣೆಯ ಬ್ರೆಡ್ ಭಾಜಿ ತಿಂದು ಇನ್ನೊಂದು ಲೋಟ ನೀರು ಹೆಚ್ಚಾಗಿ ಕುಡಿದು ಹೊಟ್ಟೆಯ ಮೇಲೆ ಕೈ ಯಾಡಿಸುತ್ತ ರೋಡಿನಲ್ಲಿ ತಿರುಗಾಡುತ್ತಿದ್ದೆವು. ಎಂದು ತವರಾಸಿಯಾ ಹೇಳಿದರೂ ದೇಸಾಯಿಯವರು ಮಾತಿನಲ್ಲಿ ಕಟು ಸತ್ಯವಿದೆ.

ಎನ್.ಸಿ.ದೇಸಾಯಿಯವರ ಕಲಾಶಿಕ್ಷಣದ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯದ ಸಂದರ್ಭದಲ್ಲಿ ಇವರ ಸ್ನೇಹಿತರನ್ನು ಸಂಪರ್ಕಿಸಬೇಕಾಯಿತು. ಅದಕ್ಕೆ ಪೂರ್ವದಲ್ಲಿ ಅವರ ಸೊಸೆ ಭಾರತಿ ದೇಸಾಯಿಯವರಿಂದ

ವಿಳಾಸಗಳನ್ನು ಸಂಗ್ರಹಿಸಿ ಬೆಂಗಳೂರಿನಲ್ಲಿ ಇರುವ ಬಿ.ಎ. ಪಾಟೀಲರನ್ನು ಫೋನ್ ಮೂಲಕ ಸಂಪರ್ಕಿಸಿದ ನಂತರ ಅವರಿಗೂ ಸಹ ಕಲಾಶಿಕ್ಷಣದ ಬಗ್ಗೆ ಅಷ್ಟು ಮಾಹಿತಿ ಇರಲಿಲ್ಲವಂತೆ. ಅವರಿಗೆ ತಿಳಿಸಿದಾಗ ಅವರ ಮತ್ತೊಬ್ಬ ಸ್ನೇಹಿತ ಸೋಲಪುರಕರ ಅವರ ವಿಳಾಸ ನೀಡಿದರು. ಅವರು ಮೈಸೂರುನಲ್ಲಿ ವಾಸವಿದ್ದರೆ ಅವರ ಮನೆಗೆ ಭೇಟಿ ನೀಡಿ ಮಾಹಿತಿ ಸಂಗ್ರಹಿಸಲಾಗಿದೆ.

ಸೋಲಪುರಕರ್ ಅವರು ಕರ್ನಾಟಕದವರು ಇವರು ಎನ್.ಸಿ. ದೇಸಾಯಿಯವರು ಸಹಪಾಠಿ ಇವರು ನೂತನ ಮಂದಿರದಲ್ಲಿ ೫ ವರ್ಷ ಕಾಲ ಅಧ್ಯಯನ ಮಾಡಿ ನಂತರ ಜೆ.ಜೆ. ಕಲಾಶಾಲೆಯ ಜೆ.ಡಿ. ಮುಗಿಸಿಕೊಂಡು ಅಲ್ಲಿಯೇ ಅಧ್ಯಾಪಕರಾಗಿ ನಂತರ ಪ್ರಾಚಾರ್ಯರಾಗಿ ನಿವೃತ್ತರಾಗಿ ನಂತರ ತಾಯಿನಾಡಿಗೆ ಬಂದರು. ಕೆಲವು ವರ್ಷಗಳ ಕಾಲ ಕಲಾಶಾಲೆಯಲ್ಲಿ ಡೀನ್‌ರಾಗಿ ಕಾರ್ಯನಿರ್ವಹಿಸಿದರು. ಪ್ರಸ್ತುತ ಮನೆಯಲ್ಲಿ ಕಲಾಸಾಧನೆಯಲ್ಲಿ ತೊಡಗಿರುವರು.

ಪ್ರೊಫೆಸರ್ ಸೋಲಪುರಕಾರರನ್ನು ಎನ್.ಸಿ. ದೇಸಾಯಿಯವರನ್ನು ಕುರಿತು ಕೇಳಿದಾಗ ಮತ್ತು ಕಲಾಶಿಕ್ಷಣ ಕುರಿತು ಹೀಗೆ ಹೇಳಿದರು. ಎನ್.ಸಿ. ದೇಸಾಯಿಯವರು ೧೯೫೦ರಲ್ಲಿ ಮುಂಬೈಯಲ್ಲಿ ನೂತನ ಕಲಾಮಂದಿರದಲ್ಲಿ ಪರಿಚಯವಾದರು ಹಾಗೂ ನಾವಿಬ್ಬರು ಒಂದೇ ತರಗತಿಯಲ್ಲಿ ಕಲಿತವರು. ನೂತನ ಕಲಾಮಂದಿರದಲ್ಲಿ ಎಲ್ಲ ವಿದ್ಯಾರ್ಥಿಗಳು ಕಲಿಯುವ ಅವಕಾಶವಿತ್ತು. ಅಲ್ಲದೇ ಪ್ರೊಫೆಶನಲಿಸ್ಟ್ ವ್ಯಕ್ತಿಗಳೂ ಸಹ ಕಲಿಯಬಹುದು. ಪ್ರತಿದಿನ ಹಾಜರಾತಿ ವ್ಯವಸ್ಥೆಯೇನೂ ಇರಲಿಲ್ಲ. ಇಲ್ಲಿ ಅಭ್ಯಾಸ ಮಾಡುವುದು ಮಾತ್ರ. ಪರೀಕ್ಷೆ ಮಾತ್ರ ಜೆ.ಜೆ. ಸ್ಕೂಲ್ ಆಫ್ ಆರ್ಟ್‌ನಲ್ಲಿ ನಡೆಯುತ್ತಿದ್ದವು. ಅಲ್ಲಿ ಪರೀಕ್ಷೆಗೆ ಪರವಾನಿಗೆ ಸಿಗಬೇಕು ಎಂದರೆ ಬಹಳ ಕಷ್ಟವಾದ ಕೆಲಸ. ಅದಕ್ಕೆ ಸರಿಯಾದ ರೀತಿಯ ಕಲಾಕೃತಿಗಳನ್ನು ರಚನೆ ಮಾಡಲೆಬೇಕು. ಇಲ್ಲವಾದಲ್ಲಿ ಪರೀಕ್ಷೆ ಪರವಾನಿಗೆ ಸಿಗುವುದಿಲ್ಲ. ನೌಕರಿ ಮಾಡುತ್ತಾ ಬಿಡುವಿನ ವೇಳೆಯಲ್ಲಿ, ಸಂಜೆ ಹೊತ್ತು ಕಲಿಯುವ ಅವಕಾಶವಿತ್ತು. ನೂತನ್ ಕಲಾಮಂದಿರ ಕ್ರಿ.ಶ.೧೯೪೦ರಲ್ಲೇ ಪ್ರಾರಂಭವಾಗಿದ್ದು, ಈ ಶಾಲೆಯನ್ನು ನಮ್ಮ ಕನ್ನಡದವ ಖ್ಯಾತ ಕಲಾವಿದ ಕಲಾಗುರು ಎಂದೇ ಪ್ರಸಿದ್ಧಿ ಪಡೆದ ದಂಡಾವತಿಮಠರವರು ಈ ಕಲಾಶಾಲೆಯ ರುವಾರಿಗಳಾಗಿದ್ದರು. ಈ ಕಲಾಶಾಲೆಯನ್ನು ನಡೆಸುತ್ತಿದ್ದರು. ಅಲ್ಲಿ ಶಿಕ್ಷಣ ಕೊಡುವ ಪದ್ಧತಿ, ಒಂದು ದೊಡ್ಡ ಕೊಠಡಿಯಲ್ಲಿ ಬೇರೆ ಬೇರೆ ವಿಭಾಗಗಳಂತೆ ಮಾಡಿಕೊಂಡು ಪಾಠ ಮಾಡುತ್ತಿದ್ದರು. ಜೆ.ಜೆ. ಕಲಾಶಾಲೆಗೆ ಬರುವ ರೂಪದರ್ಶಿಗಳು ಇಲ್ಲಿಗೂ ಬರುತ್ತಿದ್ದರು. ಆ ರೂಪದರ್ಶಿಗಳು ಕೂಡಿಸಿಕೊಂಡು ಭಾವಚಿತ್ರ ಮತ್ತು ವ್ಯಕ್ತಿಚಿತ್ರ ಬರೆಯುತ್ತಿದ್ದರು.

ಎನ್.ಸಿ. ದೇಸಾಯಿಯವರು ನೌಕರಿ ಮಾಡ್ತಾ ಮಾಡ್ತಾನೇ ಕಲಾಶಿಕ್ಷಣವನ್ನು ಮಾಡುತ್ತಿದ್ದರು. ಎಲ್ಲಾ ರೀತಿಯ ಸೌಲಭ್ಯಗಳು ದೊರೆಯುತ್ತಿದ್ದವು. ಜೊತೆಗೆ ಕಲಿಯಲು ಒಳ್ಳೆಯ ವಾತಾವರಣವು ಇತ್ತು. ದಂಡಾವತಿ ಮಠರವರ ಪ್ರೋತ್ಸಾಹವೂ ಇತ್ತು. ನೌಕರಿ ಮಾಡುವವರು ಮುಂಜಾನೆ ಅಥವಾ ಸಂಜೆಯ ಹೊತ್ತು. ಬಿಡುವು ಮಾಡಿಕೊಂಡು ಬಂದ ಪಠ್ಯಕ್ರಮಗೆ ತಕ್ಕ ರೀತಿಯಲ್ಲಿ ಕಲಾಕೃತಿಗಳನ್ನು ರಚನೆ ಮಾಡಬಹುದು. ಈ ರೀತಿಯ ಅನುಕೂಲಗಳನ್ನು ಮಾಡಿಕೊಡುತ್ತಿದ್ದರು.

ಎನ್.ಸಿ. ದೇಸಾಯಿಯವರು ಮುಂಜಾನೆ ಕ್ಲಾಸ್‌ಗೆ ಮತ್ತು ಸಂಜೆಯ ಕ್ಲಾಸ್‌ಗೆ ಬರುತ್ತಿದ್ದರು. ಶನಿವಾರ, ಭಾನುವಾರ ರಜೆ ದಿನಗಳಲ್ಲಿ ನೂತನ ಕಲಾಮಂದಿರದಲ್ಲಿ ಇದ್ದು ಅಭ್ಯಾಸ ಮಾಡುತ್ತಿದ್ದರು. ದಂಡಾವತಿಮಠ ಗುರುಗಳು ತುಂಬ ಒಳ್ಳೆಯವರು ಇದ್ದರು. ಎಲ್ಲರ ಜೊತೆಗೆ ಪ್ರೀತಿಯಿಂದ ಇರುತ್ತಿದ್ದರು ಮತ್ತು ಪ್ರೀತಿಯಿಂದ ಕಲಿಸುತ್ತಿದ್ದರು. ಪ್ರಮುಖವಾಗಿ ಕರ್ನಾಟಕದಿಂದ ಬಂದವರಿಗೆ ಬಹಳ ಸುಖಸೌಲಭ್ಯ ಮಾಡಿಕೊಡುತ್ತಿದ್ದರು. ಫೀಜ್ ತೊಗಳ್ತಾ ಇರಲಿಲ್ಲ. ಎಲ್ಲ ಅನುಕೂಲಗಳು ಮಾಡಿಕೊಂಡಿರುತ್ತಿದ್ದರು. ಒಟ್ಟಾರೆ ಕರ್ನಾಟಕದಿಂದ ಕಲಿಯಲು ಬಂದ ಎಲ್ಲ ವಿದ್ಯಾರ್ಥಿಗಳಿಗೆ ಸಹಾಯ ಮಾಡ್ತಾ ಇದ್ದರು. ಜೆ.ಜೆ.ಯಲ್ಲಿ ಕಲಿಯುವ ವಿದ್ಯಾರ್ಥಿಗಳಿಗೂ ಕೂಡ ನೂತನ ಮಂದಿರದಲ್ಲಿ ಬಂದ ಅಭ್ಯಾಸ ಮಾಡಲು ಅವಕಾಶ ನೀಡುತ್ತಿದ್ದರು. "ಯಾರು ಎಷ್ಟು ಕಲಿಬೇಕು ಅಷ್ಟು ಕಲಿಯಿರಿ" ಅಂತಿದ್ದರು.

ಅಲ್ಲಿ ಕಲಿಯಲು ಬಂದವರು ಎಲ್ಲರು ಕರ್ನಾಟಕದವರೆ ಇರಲಿಲ್ಲ. ಹಿಂದಿ, ಗುಜರಾತಿ, ಮರಾಠಿಗರು ಮತ್ತು ಹಲವಾರು ರೀತಿಯವರು ಇದ್ದರು. ಕನ್ನಡದ ವಿದ್ಯಾರ್ಥಿಗಳು ಹೆಚ್ಚು ಪ್ರಾಚಾರ್ಯರಿಗೆ ಹತ್ತಿರವಾಗಿದ್ದರು. ಏಕೆಂದರೆ ಪ್ರಾಚಾರ್ಯರು ಕೂಡ ಕನ್ನಡದವರೇ ಆಗಿದ್ದರಿಂದ ಕರ್ನಾಟಕದ ಅನೇಕ ಮಕ್ಕಳಿಗೆ ಫೀಜ್ ಕೊಡಲು ಆಗುತ್ತಿರಲಿಲ್ಲ. ಅಂತವರಿಗೂ ಕಲಿಯಲು ಅವಕಾಶ ಕೊಟ್ಟರು. ಕಲಾ ಶಿಕ್ಷಣ ಪಡೆಯುವಾಗ ದೇಸಾಯಿಯವರು ಸಮಕಾಲೀನ ಮನಸ್ಸುಳ್ಳವರು ಪ್ರಾಮಾಣಿಕ, ಸರಳಜೀವಿ, ತಮ್ಮ ಕೆಲಸದಲ್ಲಿ ಮಗ್ನರಾಗಿರುವ ಶಿರಿ ಸ್ಟ್ರೇಟ್ ಫಾರ್‌ವರ್ಡ್ ಆಗಿರುವ ಮಹತ್ವಾಕಾಂಕ್ಷಿಯಲ್ಲದ ವ್ಯಕ್ತಿತ್ವವನ್ನು ಹೊಂದಿದವರಾಗಿದ್ದರು. ಕಾರಣವೇನೆಂದರೆ ನೌಕರಿಯ ಜೊತೆ ಕಲಾಕ್ಷೇತ್ರದಲ್ಲಿ ತೊಡಗಿಸಿಕೊಂಡಿರುವುದರಿಂದ ಬ್ಯಾಲೆನ್ಸ್ ಮಾಡುವುದು ಕಷ್ಟಕರವಾದುದು. ಬಿಡುವಿನ ವೇಳೆಯಲ್ಲಿ, ಕೆಲಸ ಮಾಡುತ್ತಾ ಹಾಗೂ ಶನಿವಾರ, ಭಾನುವಾರಗಳನ್ನು ಸ್ನೇಹಿತರೊಂದಿಗೆ ಸೇರಿ ನಿಸರ್ಗ ಚಿತ್ರಗಳು, ಭಾವಚಿತ್ರಗಳನ್ನು ಅಭ್ಯಾಸ ಮಾಡುತ್ತಿದ್ದರು. ವರ್ಕ್ ಮಾಡುತ್ತಾ ಕಾಲ ಕಳೆಯುತ್ತಿದ್ದರು. ಎಲ್ಲರೊಂದಿಗೂ ಬೆರೆಯುತ್ತಿದ್ದರು. ಎಲ್ಲ ರೀತಿಯ ಸಹಪಾಠಿಗಳು ಸ್ನೇಹ ಬಳಗ ಹೆಬ್ಬಾಳೆ, ಬಿ.ಎ. ಭಟ್, ದಯಾಶೆಟ್ಟಿ, ಸೋಲಪುರಕಾರ್ ಮತ್ತು ಮರಾಠಿಯ ಅನೇಕ ಮಿತ್ರರು ತುಂಬಾ ಆತ್ಮೀಯತೆಯಿಂದ ಇದ್ದು ಕಲಿಯುತ್ತಿದ್ದರು.

ನೂತನ ಕಲಾಮಂದಿರ ಮತ್ತು ಜೆ.ಜೆ. ಕಲಾಶಾಲೆಯ ಪಠ್ಯಕ್ರಮ ಒಂದೇ ರೀತಿಯಾಗಿ ಇರುತ್ತಿತ್ತು. Theory ಬಹಳ ಇರುತ್ತಿರಲಿಲ್ಲ. ಪ್ರಾಯೋಗಿಕ ವಿಷಯಗಳು ಮಾತ್ರ ಬಹಳ ಇರುತ್ತಿದ್ದವು. ಪರೀಕ್ಷೆಗೂ ಪೂರ್ವದಲ್ಲಿ ಎಲ್ಲ ವಿದ್ಯಾರ್ಥಿಗಳು ಉತ್ಕೃಷ್ಟವಾದ ಚಿತ್ರಗಳನ್ನು ಪರೀಕ್ಷೆ ಕೇಂದ್ರಕ್ಕೆ ಕಳಿಸಿಕೊಡುತ್ತಿದ್ದರು. ಪರೀಕ್ಷೆ ಕೇಂದ್ರ ಜೆ.ಜೆ. ಸ್ಕೂಲ್ ಆಫ್ ಆರ್ಟ್‌ದವರು ಚಿತ್ರಗಳನ್ನು ನೋಡಿ ಪರೀಕ್ಷೆಗೆ ಕೂಡಲು ಅರ್ಹತೆ ಇದೆಯೋ ಇಲ್ಲವೋ ಎಂದು ಹೇಳುತ್ತಿದ್ದರು. ಅದರಿಂದ ಎಲ್ಲ ವಿದ್ಯಾರ್ಥಿಗಳು ಉತ್ತಮ ಉತ್ಕೃಷ್ಟವಾದ ಕಲಾಕೃತಿಗಳನ್ನು ರಚನೆ ಮಾಡುತ್ತಿದ್ದರು.

ನಾವು ಕಲಿಯುವ ಅವಧಿಯಲ್ಲಿ ನೂತನ ಮಂದಿರದಲ್ಲಿ ೩೦೪೦ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದರು. ಒಂದು ಕೊಠಡಿಯಲ್ಲಿ ೫ ಭಾಗಗಳನ್ನಾಗಿ ಮಾಡಿ ಅಧ್ಯಯನ ಮಾಡುತ್ತಿದ್ದೆವು. ಒಂದೊಂದು

ಕಡೆ ಒಂದೊಂದು ವಿಷಯವಿಟ್ಟುಕೊಂಡು ಅಭ್ಯಾಸ ಮಾಡುತ್ತಿದ್ದರೆ ಒಂದು ಕಡೆ ಜಲವರ್ಣದಿಂದ ಇನ್ನೊಂದು ಕಡೆ ತೈಲವರ್ಣದಿಂದ ಮತ್ತೊಂದು ಕಡೆ ಜೀವ ಮಾದರಿಯ ಚಿತ್ರವನ್ನು ಬಿಡಿಸುತ್ತಿದ್ದೆವು. ಇದೇ ರೀತಿಯಲ್ಲಿ ನೂತನವಾಗಿ ಮುಂಜಾನೆ ೭ ರಿಂದ ರಾತ್ರಿ ೧೦ ಗಂಟೆಯವರಿಗೆ ವಿದ್ಯಾರ್ಥಿಗಳು ಇದ್ದೇ ಇರುತ್ತಿದ್ದರು. ಅದು ಒಂದುಕಲಾ ಮಂದಿರವಷ್ಟೆಯಲ್ಲಾ ಅದು ಒಂದು ಕಲಾ ದೇವಾಲಯವಾಗಿತ್ತು. ಸದಾ ತೆಗೆದೆ ಇರುತ್ತಿತ್ತು. ನೂತನ ಕಲಾಮಂದಿರದ ಎದುರಿಗೆ ದಂಡಾವತಿ ಮಠದವರ ಮನೆಯಿತ್ತು. ದಂಡಾವತಿ ಮಠವರು ಮುಂಜಾನೆಯಿಂದ ರಾತ್ರಿಯವರೆಗೆ, ಕ್ಲಾಸ್ ಅವಧಿಯಷ್ಟೇ ಅಲ್ಲದೆ ಬೇರೆ ಸಮಯದಲ್ಲಿ ಕೂಡ ಯಾವಾಗ ಬೇಕು ಆವಾಗ ಒಂದು ಪಾಠ ಮಾಡುತ್ತಿದ್ದರು. ನೂತನ ಮಂದಿರದಲ್ಲಿ ಡಿ.ಟಿ.ಸಿ. ಮತ್ತು ಎ.ಎಂ. ಕೋರ್ಸ್ ಮಾತ್ರ ಇತ್ತು. ಮುಂದೆ ಜೆ.ಡಿ. ಮಾಡಿಕೊಳ್ಳಬೇಕು ಎಂದರೆ ಜೆ.ಜೆ.ಯಲ್ಲಿ ಹೋಗಿ ಪ್ರವೇಶ ಪಡೆಯಬೇಕು. ಈ ರೀತಿಯ ವ್ಯವಸ್ಥೆ ಇತ್ತು. ಒಟ್ಟಾರೆ ೫ ವರ್ಷಗಳ ಕೋರ್ಸ್ ನೂತನದಲ್ಲಿ ಇತ್ತು.

ಯಾರು ನೌಕರಿ ಮಾಡ್ತಾ ಕಲಿತಾರೊ ಅವರಿಗೆ ಹೆಚ್ಚು ಒಲವು ತೋರಿಸುತ್ತಿದ್ದರು. ಯಾಕೆಂದರೆ ಹಗಲೆಲ್ಲಾ ನೌಕರಿ ಮಾಡಿ ಬಂದಿರ್‍ತವಲ್ಲ ಬೆಳಗ್ಗೆ ಬಂದು ಕಲಿತದ್ದವರಿಗೆ ಹೆಚ್ಚು ಆಸಕ್ತಿ ತೋರಿಸುತ್ತಿದ್ದರು. ಡಬಲ್ ಪ್ರಯತ್ನ ಮಾಡ್ತಾ ಇದ್ದವರು ಎಂದು ಆಗಿನ ಕಾಲದಲ್ಲಿ ಮುಂಬೈಯಲ್ಲಿ ಅಷ್ಟು ಮನಸ್ಸು ಕೊಟ್ಟು ಕಲಿಸಿಕೊಡುವವರು ಬಹಳ ಕಡಿಮೆ.

## ಕಲಾವಿಧಾನ

ಮುಖ್ಯವಾಗಿ ದೇಸಾಯಿವರು ಸಾಂಪ್ರದಾಯಿಕ ಪರಿಸರದಿಂದ ಬಂದವರು, ಜೊತೆಗೆ ಧಾರ್ಮಿಕ ಕಾರ್ಯಗಳಲ್ಲಿ ತೊಡಗಿಸಿರುತ್ತಿದ್ದರು. ಅದರಿಂದ ಅವರು ಧಾರ್ಮಿಕವಾದ ಗ್ರಂಥಗಳನ್ನು ಓದುತ್ತಿದ್ದರು. ಅದಕ್ಕೆ ಅವರು ಹೆಚ್ಚು ಸಾಂಪ್ರದಾಯಿಕ ಪದ್ಧತಿಯಲ್ಲಿ ಕಲಾಕೃತಿಗಳನ್ನು ರಚನೆ ಮಾಡಿದ್ದಾರೆ. ಅವರ ಕಲಾಕೃತಿಗಳು ಹೆಚ್ಚು ಧಾರ್ಮಿಕ ಆಧ್ಯಾತ್ಮಿಕ ವಿಷಯಗಳ ಮೇಲೆ ಆಧಾರವಾಗಿವೆ. ಅವರು ಹೆಚ್ಚು ನೈಜವಾದ ಪದ್ಧತಿಯಲ್ಲಿ ಕೃತಿಗಳನ್ನು ರಚನೆ ಮಾಡುತ್ತಿದ್ದರು. ಅದಕ್ಕೆ ಬಹಳ ಸಮಯಬೇಕು. ಆದ್ದರಿಂದ ಅವರು ನಿಧಾನವಾದರೂ ಅವರ ಕಲಾಕೃತಿಗಳಲ್ಲಿ ಸೃಜನಾತ್ಮಕವಾದ ವಿದ್ಯುತ್ ಇರುತ್ತಿತ್ತು. ಅದಕ್ಕೆ ಅವರು ಆಧುನಿಕ ಕಲಾಕೃತಿಗಳಿಗಿಂತ ಸಂಪ್ರದಾಯ ಕಲಾಕೃತಿಗಳನ್ನು ಹೆಚ್ಚು ರಚನೆ ಮಾಡುತ್ತಿದ್ದರು. ಅವರ ಕಲಾಕೃತಿಗಳಲ್ಲಿ ಸಮಕಾಲೀನಕ್ಕೆ ಸಂಬಂಧಿಸಿ ವಿಷಯಗಳು ಒಳಗೊಂಡಿರುತ್ತಿದ್ದವು. ಅವರು ಒಳ್ಳೆಯ ಛಾಯಾಗ್ರಾಹಕರಾಗಿದ್ದರು. ಛಾಯಾಗ್ರಾಹಕರಲ್ಲಿ ಬಹಳ ಆಸಕ್ತಿಯನ್ನು ಹೊಂದಿದವರು. ಜೊತೆಗೆ ಅವರು ಅಧ್ಯಯನ ಮಾಡುವ ಸಮಯದಲ್ಲಿಯೇ ಅವರಿಗೆ ಪತ್ರಿಕೋದ್ಯಮ ವಿಷಯದಲ್ಲಿ ಆಸಕ್ತಿಯುಳ್ಳವರು. ತಮಗೆ ಕಂಡದ್ದೆಲ್ಲ ಲಕ್ಷ್ಯ ಕೊಟ್ಟು ನೋಡಿ ಫೋಟೊ ತೆಗೆದು ಆ ವಿಷಯ ಕುರಿತು ಪತ್ರಿಕೆಗೆ ಬರೆಯುತ್ತಿದ್ದರು. ಅವರು ವಾಣಿಜ್ಯ ಛಾಯಾಚಿತ್ರಕರೂ ಆಗಿದ್ದರು.

ಎಸ್.ಸಿ. ದೇಸಾಯಿ ದಂಡಾವತಿ ಮಠರ ನೂತನ ಕಲಾಮಂದಿರಕ್ಕೆ ೨೫ ತುಂಬಿದಾಗ ಇಂಗ್ಲಿಷ್ ಮರಾಠಿ ಪತ್ರಿಕೆಗಳಲ್ಲಿ ವಿವರವಾದ ಲೇಖನಗಳು ಬಂದವು. ಆದರೆ ಈ ಕನ್ನಡಿಗ, ಕಲಾಗುರುವಿನ ಬಗ್ಗೆ ಕನ್ನಡದಲ್ಲಿಯೂ

ಬರಬೇಕೆಂದು ಹಠತೊಟ್ಟು, ದೇಸಾಯಿ ಒಂದು ಲೇಖನ ಬರೆದರು. ಆದರೆ ತಮ್ಮ ಹೆಸರಿನಲ್ಲೇ ಕಳುಹಿಸಲು ಅಳುಕಿ, ಕಲಾಪ್ರಿಯ ಗುಪ್ತನಾಮದಲ್ಲಿ ಈ ಲೇಖನ ಬೆಂಗಳೂರಿನ ಜನಪ್ರಿಯ ಪತ್ರಿಕೆಯಲ್ಲಿ ಪ್ರಕಟವಾಯಿತು. ಲೇಖನದ ಶೀರ್ಷಿಕೆ ದಂಡಾವತಿ ಮಠರಿಗೆ ಗುರುದಕ್ಷಿಣೆಯೆಂದು ಬಂದಿತು.

ದಂಡಾವತಿ ಮಠರವರ ಶೈಲಿಯನ್ನು ಹೆಚ್ಚು ಇಷ್ಟ ಪಡುತ್ತಿದ್ದರು. ಜಲವರ್ಣ ಬಣ್ಣಗಳನ್ನು ಬಳಸುತ್ತಿದ್ದರು. ಅದು ಎಸ್.ಸಿ. ದೇಸಾಯಿಯವರ ಮೇಲೆ ಪ್ರಭಾವ ಬೀರಿದೆ. ಎಸ್.ಸಿ. ದೇಸಾಯಿಯವರು ಅನೇಕ ಹಿರಿಯ ಕಲಾವಿದರನ್ನು ಇಷ್ಟಪಡುತ್ತಿದ್ದರು. ಅಮೃತಾ ಶೇರಾಗಿಲ್ಲ, ಕೆ.ಕೆ. ಹೆಬ್ಬಾರ, ಎಸ್.ಎ.ಸಿ. ಬೇಂದ್ರೆ, ಬಿ. ಪ್ರಭಾ ಮತ್ತು ವ್ಯಾನ್ ಗೋಗ್ ಇಷ್ಟಪಡುತ್ತಿದ್ದರು. ಇವರ ಕಲಾಕೃತಿಗಳು ತುಂಬಾ ಆಧುನಿಕವಾಗಿ ಇರುತ್ತಿರಲಿಲ್ಲವಾದರೂ ಇವರ ಚಿತ್ರಗಳಲ್ಲಿ ಸಮಕಾಲೀನತೆ ಇರುತ್ತಿತ್ತು.

ಸೋಲಪುರಕರ್‌ರವರ ಹೇಳುವ ಪ್ರಕಾರ ಒಳ್ಳೆಯ ಕಲಾವಿದ ಆಗಬೇಕಾದರೆ ಅದೇ ಕ್ಷೇತ್ರದಲ್ಲಿ ತೊಡಗಿಸಿಕೊಂಡರೆ ಮಾತ್ರ ಸಾಧ್ಯ. ಇಲ್ಲವಿದ್ದರೆ ಸಂಪೂರ್ಣವಾಗಿ ತೊಡಗಿಸಿಕೊಳ್ಳಲು ಸಾಧ್ಯವಿಲ್ಲ. ಇವರು ಕಾಣುವುದೆಂದರೆ ಸೇವೆ ಮಾಡ್ತಾ ಕಲಾಕ್ಷೇತ್ರದಲ್ಲಿ ತೊಡಗಿಸಿಕೊಂಡಿರುವುದರಿಂದ ಈ ಕ್ಷೇತ್ರದಲ್ಲಿ ಅಷ್ಟೊಂದು ಒಂದು ಕಡೆ ಜ್ಞಾನ ಕೊಡಲು, ಸಾಧ್ಯವಾಗಲಿಲ್ಲ. ಆದರೂ ಸುಪ್ರಸಿದ್ಧ ಕಲಾವಿದರಲ್ಲಿ ಒಬ್ಬರು ಎಂದೂ ಹೇಳುವುದರಲ್ಲಿ ಯಾವುದೇ ರೀತಿಯ ಸಂಶಯವಿಲ್ಲ ಎಂದು ಸಂದರ್ಶನ ನೀಡಿದರು.

ನೂತನ ಕಲಾಮಂದಿರದಲ್ಲಿ ಕಲಿಕೆಯಾದ ನಂತರ ಮುಂಬಯಿಯ ಜೆ.ಜೆ. ಕಲಾಶಾಲೆಯಲ್ಲಿ ಜಿಡಿ ಆರ್ಟ್ ಪದವಿ ಗಳಿಸಿದರು. ಕಲಾ ಶಿಕ್ಷಣ ಪಡೆಯುವ ಮೊದಲು ಅವರು ಪ್ರೀಮಿಯರ್ ಆಟೊಮೊಬೈಲ್ಸ್‌ನ ಜಾಹೀರಾತು ವಿಭಾಗದಲ್ಲಿ ನೌಕರಿಯಲ್ಲಿ ಮುಂದುವರಿದರು. ಬಾಲಕೃಷ್ಣ ನಂತರ ವಿದ್ಯಾ ಮತ್ತು ವಿನೋದ ಹುಟ್ಟಿದರು. ಮುಂಬೈಯಲ್ಲಿ ಎಸ್.ಸಿ.ದೇಸಾಯಿಯವರ ಗೆಳೆಯರ ಬಳಗ ದೊಡ್ಡದು. ಕೆ.ಕೆ. ಹೆಬ್ಬಾರರು, ಶಂಕರ್‌ಪಾಟೀಲರು, ಸಂತೋಷ ಗುಲ್ವಾಡೆ, ಸೋಲಪುರಕರ, ದಯಶೆಟ್ಟಿ, ತಿಪ್ಪೇಸ್ವಾಮಿ ಮತ್ತು ಅನೇಕ ಸಾಹಿತಿಗಳು ಸಖ್ಯ. ಚಿದಂಬರ ಸೇವಾ ಮಂಡಳಿ ಜೊತೆಗೆ ಕರ್ನಾಟಕ ಸಂಘ ಹುಟ್ಟಿಹಾಕಿದರು. ಗಿರೀಶ್ ಕಾರ್ನಾಡ್ ಮತ್ತು ಕಲಾವಿದ ಕೆ.ಕೆ. ಹೆಬ್ಬಾರ, ತಿಪ್ಪೇಸ್ವಾಮಿಯಂತಹ ಅನೇಕ ಕಲಾವಿದರು ಬಂದು ಹೋಗುತ್ತಿದ್ದರು. ಉದ್ಯೋಗದಲ್ಲಿ ಇದ್ದು ದಣಿವರಿಯದ ಓಡಾಟವಾಗುತ್ತಿತ್ತು.

ಪ್ರೀಮಿಯರ್ ಕಂಪನಿಯ ಪ್ರಚಾರ ವಿಭಾಗದಲ್ಲಿ ಕೆಲಕಾಲ ದುಡಿದರು. ಕಂಪನಿಯ ಪ್ರಚಾರ ಪತ್ರಿಕೆಗಳು, ಜಾಹಿರಾತುಗಳು, ತಾಂತ್ರಿಕ ಪ್ರಕಟಣೆಗಳ ಸಿದ್ಧತೆ ಮತ್ತು ಮುದ್ರಣ ತಾಂತ್ರಿಕ ವಿಷಯದಲ್ಲಿ ಹೆಚ್ಚಿನ ಜ್ಞಾನವನ್ನು ಬೆಳೆಸಿಕೊಳ್ಳಲು ಅತ್ಯಂತ ಅನುಕೂಲವಾಯಿತು. ಆದರೆ ದಿನದ ಸಾಕಷ್ಟು ಸಮಯ ಈ ಜವಾಬ್ದಾರಿ ಕಾರ್ಯಗಳಲ್ಲಿ ಕಳೆದುಹೋಗುತ್ತಿತ್ತು. ಹಗಲು ರಾತ್ರಿ ದುಡಿಯಬೇಕಾಗುತ್ತಿತ್ತು.

ಇಂಥ ಗಡಿಬಿಡಿ ಸಂದರ್ಭಗಳಲ್ಲೂ ಅವರಲ್ಲಿ ಹುದುಗಿದ್ದ ಕಲಾವಿದ ಅವರನ್ನು ಸುಮ್ಮನೆ ಬಿಡುತ್ತಿರಲಿಲ್ಲ. ಈ ತೆರನಾದ ಪರಿಶ್ರಮದ ಮಧ್ಯೆಯೇ ಅವರ ಕಲಾಸೃಷ್ಟಿ ಸಾಗುತ್ತಿತ್ತು, ಅವರ ನೂರಾರು

ವರ್ಣಚಿತ್ರಗಳು ರೂಪಗೊಂಡು ಬಂದವು. ಹೀಗೆ ಒಂದೊಂದು ವರ್ಣಚಿತ್ರಕ್ಕೂ ಅನೇಕ ದಿನಗಳವರೆಗೆ ಅವರು ಪರಿಶ್ರಮಮಿಸಿದ್ದಾರೆ. ಸಮಯದ ಅಭಾವ ಅವರನ್ನು ಕಾಡುತ್ತಿತ್ತು. ಆದರೆ ಮನಸ್ಸಿನ ಮಿತ, ಹೃದಯದ ಅಳಲು ಅವರನ್ನು ಪ್ರೇರೇಪಿಸುತ್ತಿತ್ತು. ಅವರ ಮನದ ಪ್ರೇರಣೆ ದೇಹದ ದಣಿಯನ್ನು ಮೀರಿ ನಿಲ್ಲುತ್ತಿತ್ತು. ಈ ತಾಕಲಾಟದಲ್ಲಿಯೇ ಕಲಾಕೃತಿಗಳು ನಿರ್ಮಾಣವಾದವು.

ಅವರ ವರ್ಣಚಿತ್ರಗಳಲ್ಲಿ ನಿಸರ್ಗ ಸೊಬಗಿನ ಚಿತ್ರಣವಿದೆ, ಪ್ರಾಣಿ ಪ್ರಪಂಚದ ವೈವಿಧ್ಯವಿದೆ. ಸೃಜನಾತ್ಮಕ ಸೃಷ್ಟಿಯಿದೆ, ಕಲಾತ್ಮಕ ಅಭಿವ್ಯಕ್ತಿಯಿದೆ. ಅನೇಕ ತಪಸ್ವಿಗಳು, ಪಣ್ಯ ಪುರುಷರು, ಮಾನ್ಯರು ಅವರು ಕಲೆಯಲ್ಲಿ ಮೂಡಿನಿಂತಿದ್ದಾರೆ. ಶ್ರೀ ಚಿದಂಬರೇಶ್ವರ ಚಿತ್ರ ಅದ್ವಿತೀಯವಾದುದು, ಬಹುಶಃ ಕಲಾವಿದನ ಹೃದಯಾಂತರಾಳದಿಂದ ಮೂಡಿನಿಂತ ಅಭಿವ್ಯಕ್ತಿ. ಆ ಚಿತ್ರದ ಅಪರೂಪತೆಗೆ ಕಾರಣವಾಗಿರಲು ಸಾಕು, ದಾಸರು, ಹಾಡುಗಾರರು, ವಾದಕರು, ಪೂಜ್ಯನಿರತ ಮುತ್ತೈದೆಯವರು ಹೀಗೆ ಹಲವಾರು ವಿಧದಲ್ಲಿ ಸಹಜತೆಯ ಚಿತ್ರಗಳಿವೆ. ಇಂಥ ಚಿತ್ರಗಳೆಲ್ಲ ಜನಸಾಮಾನ್ಯನಿಗೂ ಮನ ತುಂಬುವ ದೃಷ್ಟಿ ಇರಿಸಿಕೊಂಡೇ ಚಿತ್ರಿಸಿರುವುದರಿಂದ ಸ್ವಾಭಾವಿಕತೆಗೆ ಸಹಜತೆಗೆ ಅವರು ತುಂಬ ಮಹತ್ವ ಕೊಟ್ಟಿರುವುದು ಒಡೆದು ಕಾಣುತ್ತದೆ.

ದೇಸಾಯಿಯವರು ಸ್ನೇಹಜೀವಿ ತಮ್ಮ ಪರಿಚಿತದೊಂದಿಗೆ ಸ್ನೇಹವಾಗಿರುವಷ್ಟೇ ಕಲಾವಿದರೊಂದಿಗೂ ನಿಕಟಸ್ನೇಹದಿಂದಿರುತ್ತಿದ್ದರು. ಕರ್ಮವೀರ ಮುಖಚಿತ್ರಗಳನ್ನು ಬರೆಸುವ ಪ್ರಾಯೋಗಿಕ ಕಾರ್ಯ ಕೈಕೊಂಡಾಗ ಜನ ಸ್ನೇಹಿತರನ್ನು ಕರೆದು ತೋರಿಸುತ್ತಿದ್ದರು. ಬಂದವರಿಗೂ ಕೂಡ ತುಂಬ ಸಂತೋಷವಾಗುತ್ತಿತ್ತು. ಮುಂಬೈಯಲ್ಲಿ ೨೫, ೩೦ ಕಲಾವಿದರ ಬಳಗವೆ ಇತ್ತು. ಅವರೆಲ್ಲರೂ ಎನ್.ಸಿ. ದೇಸಾಯಿಯವರಿಗೆ ತುಂಬ ಆತ್ಮೀಯರು ಆಗಿದ್ದರು.

ಅವರ ಮನೆ ಯಾವಾಗಲೂ ಸ್ನೇಹಿತರು, ಬಂಧುಗಳಿಂದ ಗಿಜಗಿಜಿ ಗುಟ್ಟುತಲೇ ಇರುತ್ತಿತ್ತು. ಶಿಕ್ಷಣ ಮುಂದುವರಿಸಲು ಬರುವವರು. ಉದ್ಯೋಗಾರ್ಥಿಗಳು, ಮುಂಬಯಿಯ ಆಸ್ಪತ್ರೆಗಳಲ್ಲಿ ಚಿಕಿತ್ಸೆಗಾಗಿ ಬರುವವರು, ಮುಂಬಯಿ ನೋಡಲು ಬರುವವರು ಇವರಿಗೆಲ್ಲ ದೇಸಾಯಿ ಮನೆಯ ಆಶ್ರಮ, ಎನ್.ಸಿ. ದೇಸಾಯಿ ಮತ್ತು ಅವರ ಮಡದಿ ಶಾರದಾ ದೇಸಾಯಿ ನಗು ಮುಖದಿಂದಲೆ ಇವರ ಸೇವೆ ಮಾಡಿ ದಣಿಯುತ್ತಾರೆ. ಸಹಧರ್ಮಿಣಿ ಶಾರದೆಯ ಒಲವು ಕಲಾದೇವಿಯ ಕೃಪೆ, ಸಾಹಿತ್ಯ ಶಾರದೆಯ ಗೆಲುವು. ವಿವಿಧ ದೈನಿಕ, ನಿಯತಕಾಲಿಕೆಗಳಿಗೆ ಮುಂಬೈಯಿಂದಲೇ ಚಿತ್ರಲೇಖನಗಳನ್ನು ಕಳಿಸತೊಡಗಿದರು.

ಕನ್ನಡ ಕನ್ನಡೇತರ ಕಲಾವಿದರ ಬಗ್ಗೆ ವಿವಿಧ ಪತ್ರಿಕೆಗಳಲ್ಲಿ ಬರೆದಿದ್ದಾರೆ. ಕಲಾವಿಮರ್ಶೆ ಮಾಡಿದ್ದಾರೆ. ಅವರಿಗೆ ಸಾಕಷ್ಟು ಪ್ರದರ್ಶನಗಳನ್ನು ಏರ್ಪಡಿಸಲಾಗಿಲ್ಲವೆಂಬ ಕೊರಗು. ಆದರೆ ಅವರು ರಸಿಕರನ್ನು ಆರ್ಟ್‌ಗ್ಯಾಲರಿಗೆ ಎಳೆಯುವ ಬದಲು ಪತ್ರಿಕೆಗಳ ಮುಖಪುಟಗಳ ಮೂಲಕ ತಂದಿದ್ದಾರೆ ಆದರೆ, ಪ್ರದರ್ಶನಗಳನ್ನು ಅಲ್ಲಲ್ಲಿ ಏರ್ಪಡಿಸುವ ಇಚ್ಛೆ ಮಾತ್ರ ಅವರಲ್ಲಿ ಬಲವಾಗಿತ್ತು

ಒಂದೇ ವ್ಯಕ್ತಿಯಲ್ಲಿ, ಚಿತ್ರಕಲೆ, ಲೇಖನ ಕಲೆ, ಛಾಯಾಚಿತ್ರಣ ಕಲೆ ಇರುವುದು ವಿರಳ. ಅವುಗಳ ಸಂಗಮವೇ ಇವರಾಗಿದ್ದಾರೆ. ಕಲಾವಿದ ವಿಷಯವಲ್ಲದೆ ಸಚಿತ್ರವಾದ ಸ್ಥಳ ಪರಿಚಯಗಳ ಐತಿಹಾಸಿಕ ಶೋಧನೆಯೊಂದಿಗೆ ಮನಮುಟ್ಟುವಂತೆ ಬರೆಯುವ ಕಲೆ ಇವರಿಗೆ ಚೆನ್ನಾಗಿ ಸಾಧಿಸಿದೆ. ಕೋಟೆಕೊತ್ತಲಗಳ ಪರಿಚಯ ಔದ್ಯೋಗಿಕ ಪತ್ರ ವಿಷಯವಾಗಿಯೂ ಇವರು ಬರೆದುದ್ದುಂಟು.

ಕಲೆಯ ವಿಷಯವಾಗಿ ಇವರ ಶೋಧನೆಯ ತೀಕ್ಷ್ಣತೆ ಹರಿತವಾದುದು. ೨ ಶತಮಾನಗಳ ಹಿಂದೆ ಆಗಿ ಹೋದ ಸಂತ ಕಲಾವಿದ ಶುಭರಾಯ ಲೇಖನ ಇದಕ್ಕೆ ಸಾಕ್ಷಿ. ಇವರು ಒಬ್ಬ ಪತ್ರಕಾರರೂ ಎಂದು ತಿಳಿಯಲು ಅಚ್ಚರಿಯಾಗಬಹುದು. ಕನ್ನಡ ಪ್ರಭಾವಕ್ಕೆ ಮುಂಬೈ ಪತ್ರವನ್ನು ಕೆಲಕಾಲ ಬರೆದಿದ್ದಾರೆ. ಕೊಯನಾ ಭೂಕಂಪವಾದಾಗ ಪಾನಸೇವೆ ಅಣೆಕಟ್ಟು ಒಡೆದು ಪುಣೆಯಲ್ಲಿ ಜಲಪ್ರಳಯವಾದ, ತಕ್ಷಣ ಆ ಸ್ಥಳಗಳಿಗೆ ಹೋಗಿ ಸಚಿತ್ರ ವರದಿಗಳನ್ನು ನೀಡಿದ್ದಾರೆ. ಈ ರೀತಿಯಲ್ಲಿ ಅವರೊಬ್ಬ ಪತ್ರಕಾರರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಎನ್.ಸಿ. ದೇಸಾಯಿಯವರ ಹಿರಿಯ ಮಗ ಕೃಷ್ಣ ಪತ್ರಿಕೋದ್ಯಮ ಅಭ್ಯಸಿಸಿದ. ಮುದ್ರಣ ತಾಂತ್ರಿಕತೆ, ಜಾಹೀರಾತು ಕಲೆಗಳನ್ನು ಕರಗತ ಮಾಡಿಕೊಂಡ. ಕಿರಿಯ ಮಗ ವಿನೋದ ಚಿತ್ರಕಲೆಯಲ್ಲಿ ಅನುರಕ್ತನಾದ. ಮಗಳು ವಿದ್ಯಾ ಪಾದರಸದ ಚಟುವಟಿಕೆಯ ಪ್ರತಿಭಾ ಸಂಪನ್ನೇ.

ಎನ್.ಸಿ. ದೇಸಾಯಿಯವರ ಹಿರಿಯ ಮಗ ಬಾಲಕೃಷ್ಣ ಉದ್ಯೋಗ ದೊರೆತ ಮೊದಲ ದಿನವೆ ರೈಲು ಅಪಘಾತದಲ್ಲಿ ಅಸುನೀಗಿದ (೧೯೭೩). ಆದರಿಂದ ಚೇತರಿಸಿಕೊಳ್ಳಲು ದೇಸಾಯಿ ಮಗಳು ವಿದ್ಯಾ, ಕಿರಿಯ ಮಗ ವಿನೋದನ ವಿವಾಹವನ್ನು ಬೇಗನೆ ನೆರವೇರಿಸಿ ವಿನೋದ್ ದೇಸಾಯಿಯವರು ಛಾಯಾಗ್ರಾಹಕರಾಗಿ ಫ್ರಿಫ್ರೆಸ್ ಜರ್ನಲ್, ಮಿಡ್‌ಡೇ ಲೋಕ ಸತ್ತಾ ಇವನಿಂಗ್ ನ್ಯೂಸ್, ಫ್ರಿ ಫ್ರೆಸ್ ಬುಲೆಟಿನ್, ಇತರ ಕನ್ನಡ ಪತ್ರಿಕೆಗಳಲ್ಲಿ ಅವರ ಚಿತ್ರಗಳು ಬೆಳಕು ಕಂಡಿವೆ. ಇವರ ತಂದೆ ಎನ್.ಸಿ. ದೇಸಾಯಿಯವರು ಸ್ಥಾಪಿಸಿದ್ದ ಪ್ರಚುರ ಜಾಹಿರಾತು ಸಂಸ್ಥೆಯ ಉಸ್ತುವಾರಿ ವಹಿಕೊಂಡಿದ್ದರು.

ಅನುರಕ್ತವಾದ ಮಗಳು ವಿದ್ಯಾ ಪಾದರಸದ ಚಟುವಟಿಕೆಯ ಪ್ರತಿಭಾ ಸಂಪನ್ನೆ. ವಿದ್ಯಾ ಮುಂಬೈ ಜೆ.ಜೆ.ಯಲ್ಲಿ ಅವರು ಕಲಾಶಿಕ್ಷಣ ಮುಗಿಸಿದರು. ಸೋಲಪುರಕರ ವಿದ್ಯಾರ್ಥಿನಿಯಾಗಿ ಅಭ್ಯಾಸ ಮಾಡಿದವರು. ಇವರು ಪ್ರಸ್ತುತ ಗಂಡನ ಮನೆ ಮುಂಬೈಯಲ್ಲಿ ಒಂದು ಶಾಲೆಯಲ್ಲಿ ಕಲಾಶಿಕ್ಷಕಿಯಾಗಿ ಕೆಲಸ ಮಾಡುತ್ತ ಗಂಡ, ಮಕ್ಕಳ ಜೊತೆ ಸಂತೋಷವಾಗಿದ್ದಾರೆ. ಪ್ರೀಮಿಯರ್ ಆಟೋಮೊಬೈಲ್ಸ್‌ನ ಜಾಹೀರಾತು ವಿಭಾಗದ ಕಲಾವಿದನಾಗಿ ಮೂವತ್ತೈದು ವರ್ಷಗಳ ಕಾಲ ಸೇವೆ ಸಲ್ಲಿಸಿ ತಮ್ಮ ಅರವತ್ತನೇ ವಯಸ್ಸಿನಲ್ಲಿ ನಿವೃತ್ತಿಯಾದರು. ಹುಬ್ಬಳ್ಳಿಗೆ ಮರಳಿದರು. ಗೋವರ್ಧನ ಅಂಕೋಲೇಕರ್ ಅವರ ಸಹಾಯದೊಂದಿಗೆ ವಿಶ್ವವ್ಯಾಪಿ ಗಣೇಶನನ್ನು ಪೇಂಟಿಂಗ್‌ನಲ್ಲಿ ಸೆರೆಹಿಡಿದದ್ದು. ದೇಶದ ಅನೇಕ ಸ್ಥಳಗಳಲ್ಲಿ ಪ್ರದರ್ಶನ ಮಾಡಿದ್ದಾರೆ. ಇದೇ ರೀತಿ ಅನೇಕ ಕಲಾಕೃತಿಗಳ ರಚನೆ ಮಾಡಿದ್ದಾರೆ.

ಎನ್.ಸಿ. ದೇಸಾಯಿಯವರು ಮಕ್ಕಳ ವಿವಾಹವನ್ನು ಬೇಗನೆ ನೆರವೇರಿಸಿ, ಮೊಮ್ಮೊಕ್ಕಳೊಂದಿಗೆ ಸುಖೀ ಜೀವನ ನಡೆಸಿದ್ದಾಗಲೇ ಇನ್ನೊಂದು ಅಘಾತ ಕಾದಿತ್ತು. ಮಗ ವಿನೋದ ಅಕಾಲ ಮೃತ್ಯುವಿಗೀಡಾದ. ೧೯೯೫ರಲ್ಲಿ ಮೊಮ್ಮೊಕ್ಕಳ ಭವಿಷ್ಯಕ್ಕಾಗಿ ಈ ದುರಂತದಿಂದಲೂ ಚೇತರಿಸಿ ದೇಸಾಯಿ ತನ್ನ ಇಳಿ ವಯಸ್ಸಿನಲ್ಲೂ ಮತ್ತೆ ದುಡಿಯುತ್ತಿದ್ದರು.

ಕಿರಿಯ ಮಗ ವಿನೋದ್ ತನ್ನ ೪೨ನೇ ವಯಸ್ಸಿನಲ್ಲಿ ದಿಢೀರನೆ ಕಣ್ಮರೆಯಾದದ್ದು ಅವರಿಗೆ ದೊಡ್ಡ ಅಘಾತವಾಯಿತು. ಆಗ ಎಪ್ಪತ್ತೆರಡರ ವೃದ್ಧಾಪ್ಯದಲ್ಲಿ ಕಮರ್ಷಿಯಲ್ ಕಲೆಯನ್ನು ನೆಚ್ಚಿಕೊಳ್ಳುವ ಅನಿವಾರ್ಯತೆಯಾಯಿತು. ಎನ್.ಸಿ. ದೇಸಾಯಿ ಗೆಳೆಯರ ಒತ್ತಾಯಕ್ಕೆ ಕಟ್ಟುಬಿದ್ದ ಜಾಹೀರಾತು ಕಂಪೆನಿ ಸೇರಿದರು. ಅವರಿವರು ಕೈಕೊಟ್ಟಾಗ ಗಟ್ಟಿನಿಂತು ಆರ್ಟ್ ಸ್ಟುಡಿಯೋ ತೆರೆದರು.

ಇತ್ತೀಚೆಗೆ ಇವರ ಸಾಧನೆಯನ್ನು ಗಮನಿಸಿ ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಮಂತ್ರಾಲಯ ಖಾತೆಯ ಸಾಂಸ್ಕೃತಿಕ ವಿಭಾಗದಿಂದ ಫೆಲೋಶಿಪ್ ನೀಡಿದೆ. ೧೯೯೯-೨೦೦೦ನೇ ಸಾಲಿನ ಕರ್ನಾಟಕ ಲಲಿತಕಲಾ ಅಕಾಡೆಮಿಯು ಗೌರವ ಪ್ರಶಸ್ತಿ ಇವರಿಗೆ ನೀಡಲಾಗಿದೆ. ಹುಬ್ಬಳ್ಳಿ, ಧಾರವಾಡ ನಗರಪಾಲಿಕೆಯವರು ಧೀಮಂತ ನಾಗರಿಕ ಕಲಾವಿದ ಎಂದು ಪ್ರಶಸ್ತಿ ನೀಡಿದ್ದಾರೆ. ಹುಬ್ಬಳ್ಳಿಯ ಶ್ರೀನಗರ ವಿದ್ಯಾಸಂಸ್ಥೆಯವರು ಕಲಾಶ್ರೀ ಪ್ರಶಸ್ತಿ ನೀಡಿದ್ದಾರೆ.

ಅತ್ಯಂತ ಶಿಸ್ತಿನ ವ್ಯಕ್ತಿಯಾಗಿದ್ದ ದೇಸಾಯಿಯವರು ಕಲಾ ಸಂಪನ್ನರಾಗಿದ್ದರೂ ನಿಜ ಜೀವನದಲ್ಲಿ ಕಷ್ಟಕಾರ್ಪಣ್ಯಗಳಲ್ಲಿ ಕಾಲ ಸವೆದರು. ಅವರ ಜೀವನಾವಧಿಯಲ್ಲಿಯೇ ಅವರ ಇಬ್ಬರು ಪುತ್ರರನ್ನು ಕಳೆದು ಕೊಂಡಿದ್ದರು. ೨೦೦೦ರಲ್ಲಿ ಪತ್ನಿ ಶಾರದಾ ಕಣ್ಣುಮುಚ್ಚಿದಳು. ಅವರ ಜೀವನದಲ್ಲಿ ಇಷ್ಟು ನೋವು ಅನುಭವಿಸಿದರಿಂದ ಅವರ ಮನಸ್ಸು ಯಮರಾಯರನ್ನು ಕುರಿತು ಈ ರೀತಿ ಹೇಳಿದೆ.

"ಎಂಥ ಸುಂದರಿಯೇ ಇರಲಿ, ಸುಕನ್ಯೆಯೇ ಆಗರಿಲಿ ಯಮದೇವ ಯಾರನ್ನೂ ವಸುಂದರೆಯ ಮೇಲೆ ಇಗಗೊಡಲಾರ". ತನ್ನಡೆಗೆ ಎಳೆಯುವಾಗ ಅವನಿಗೆ ಶಾಂತಿ ಸಮಾಧಾನ ವಯಸ್ಸನ್ನು ನೋಡಲಾರ ಸಮಾಜಕ್ಕೆ ವ್ಯಕ್ತಿಯ ಉಪಯೋಗವನ್ನು ಲಕ್ಷಿಸಲಾರ. ಇಂಥ ಪ್ರಸಂಗಗಳಲ್ಲಿ ಯಮರಾಯ ಎಷ್ಟು ಕ್ರೂರ. ಎಂಥ ನಿಷ್ಕರುಣಿ ಎಂಬ ಕೋಪ ಮಾತ್ರ ಬಾರದೇ ಇರದು. ಅಂಥ ಒಂದು ಘಟನೆ ನಡೆಯಿತೆಂದರೆ ಯಮನನ್ನು ದೂರಬೇಕಾಗಿದೆ, ಕೋಪದಿಂದ ಬಯ್ಯಬೇಕೇನೋ ಎಂದೆನಿಸುತ್ತದೆ. ಆದರೆ ಆತ ತನ್ನ ಕಾರ್ಯ ಮಾಡಿ, ಕರ್ತವ್ಯವವನ್ನು ಮುಗಿಸಿಬಿಟ್ಟ" ಎಂದು ಲೇಖನದಲ್ಲಿ ಹೇಳಿದ್ದಾರೆ.

ಮಡದಿ ಕಣ್ಣುಮುಚ್ಚಿದ ೨ ವರ್ಷಗಳ ನಂತರ ಅವರ ದೇಹ ಸರ್ಪ ಸುತ್ತಿನ ಬಾಧೆಗೊಳಗಾಗಿ ೯ ತಿಂಗಳವರಿಗೆ ದೀರ್ಘಕಾಲದ ಅಸ್ವಾಸ್ಥದಿಂದ ದಿ. ೩೦.೫.೨೦೦೩ರಂದು ತಮ್ಮ ಸ್ವಗೃಹದಲ್ಲಿಯೆ ನಿಧನರಾದರು. ಎನ್.ಸಿ. ದೇಸಾಯಿವರು ಕುಂಚಬ್ರಹ್ಮ ಕಲಾಕ್ಷೇತ್ರಕ್ಕೆ ಅಪೂರ್ವವಾದ ಆಸ್ತಿಯಾಗಿದ್ದರು.

# ಬದುಕಿನ ಹಲವು ಪ್ರಮುಖ ಘಟ್ಟಗಳು



ಎನ್.ಸಿ. ದೇಸಾಯಿಯವರ ಚಿಕ್ಕಪ್ಪ ಬೇಟೆಯಾಡಿದ ಚಿರತೆ



ಅಗಡಿಯ ಆನಂದವನದ ಹೆಬ್ಬಾಗಿಲು



ಎನ್.ಸಿ. ದೇಸಾಯಿಯವರ ಧರ್ಮಪತ್ನಿ ಮತ್ತು ಮಕ್ಕಳು ಬಾಲಕೃಷ್ಣ ಮತ್ತು ವಿನೋದ

## ಬದುಕಿನ ಹಲವು ಪ್ರಮುಖ ಘಟ್ಟಗಳು



ಕಲಾ ಗುರು ದಂಡಾವತಿಮಠವರು ಭಾವಚಿತ್ರ ಮಾಡಿ ತೋರಿಸುತ್ತಿರುವುದು



ನೂತನ ಕಲಾಮಂದಿರದ ಶಿಕ್ಷಣ ಪದ್ಧತಿ



ನೂತನ ಕಲಾಮಂದಿರದ ಕೊಠಡಿಯ ಒಂದು ದೃಶ್ಯ

# ಬದುಕಿನ ಹಲವು ಪ್ರಮುಖ ಘಟ್ಟಗಳು


ಗುರುಗಳೊಂದಿಗೆ ಪ್ರವಾಸ


ಸ್ನೇಹಿತರೊಂದಿಗೆ ಪ್ರವಾಸ


ತಂದೆ ತಾಯಿ ಜೊತೆಗೆ ಎನ್.ಸಿ. ದೇಸಾಯಿ
(ಒಂದು ವರ್ಷದ ಮಗುವಾಗಿದ್ದಾಗ)

## ಬದುಕಿನ ಹಲವು ಪ್ರಮುಖ ಘಟ್ಟಗಳು



ಎನ್.ಸಿ. ದೇಸಾಯಿಯವರ ಧರ್ಮಪತ್ನಿ ಶಾರದಬಾಯಿ, ಮಗಳು ವಿಧ್ಯಾ ಮತ್ತು ಮಗ ವಿನೋದ



ಪ್ರಿಮೀಯರ್ ಅಟೋಮೋಬೈಲ್ಸ ಕಂಪನಿಯಲ್ಲಿ ನೌಕರಿ ಮಾಡುತ್ತಿರುವುದು.



ದೆಹಲಿಯ ಪ್ರಿಮೀಯರ್ ಅಟೋಮೋಬೈಲ್ಸ ಕಂಪನಿಯ ಪ್ರದರ್ಶನದಲ್ಲಿ ನೆಹರು ಅವರ ಛಾಯ ಚಿತ್ರಗಳ ತೆಗೆಯುತ್ತಿರುವುದು.

## ಎನ್. ಸಿ. ದೇಸಾಯಿಯವರ
# ಬದುಕಿನ ಹಲವು ಪ್ರಮುಖ ಘಟ್ಟಗಳು




ಕೆ.ಕೆ. ಹೆಬ್ಬಾರರ ರೇಡಿಯೊ
ಮತ್ತು ಟಿವಿ ಕಾರ್ಯಕ್ರಮಕ್ಕೆ
ಸಂದರ್ಶನ ಮಾಡುತ್ತಿರುವುದು.



ಗಿರೀಶ ಕಾರ್ನಾಡರೊಂದಿಗೆ
ಮುಂಬೈ ಕನ್ನಡ ಸಂಘದ ತಂಡ

## ಅಧ್ಯಾಯ ಮೂರು

## ಎನ್.ಸಿ.ದೇಸಾಯಿಯವರ ಕಲಾಕೃತಿಗಳು

ಸತ್‌ಕ್ರಿಯೆಯಿಂದ ಮನಸ್ಸು ಶುದ್ಧಿ, ಸದ್ವಿಚಾರದಿಂದ ಬುದ್ಧಿಯ ಶುದ್ಧಿ, ಅನುಭವದ ಭಾವದಿಂದ ಭಾವಶುದ್ಧಿ, ಆನಂದದಿಂದ ಆತ್ಮಶುದ್ಧಿ ಆಗುತ್ತದೆ. ಹಾಗೆಯೇ ದೇಹ ಪೋಷಕವಾದ ಅನ್ನಕ್ಕೆ ಮಹತ್ವ ಕೊಡುವ ನಾವು ಆತ್ಮಪೋಷಕವಾದ ಆನಂದಕ್ಕೆ ಹೆಚ್ಚು ಗಮನಹರಿಸಿಲ್ಲ. ಅದು ಲಲಿತಕಲೆಗಳಂತಹ ಮಾಧ್ಯಮಗಳಿಂದ ಮಾತ್ರ ಸಾಧ್ಯವಾಗುವಂತಹುದು ಎಂದು ಎಸ್.ಸಿ.ಪಾಟೀಲರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[1]

ಲಲಿತಕಲೆಗಳಲ್ಲಿ ಒಂದು "ಚಿತ್ರಕಲೆ" ಇದೂ ಕೂಡ ಒಂದು ಭಾಷೆ. ಅದು ದೃಶ್ಯಭಾಷೆ ಎಂದು ಹೇಳಬಹುದು "ದೃಶ್ಯಭಾಷೆ" ಪ್ರಪಂಚದ ಎಲ್ಲಾ ಜನರಿಗೂ ಸರಳವಾಗಿ ಅರ್ಥವಾಗುವ ಒಂದು ಭಾಷೆಯಾಗಿದೆ. ಏಕೆಂದರೆ ಸಂವಹನ ಮಾಡುವ ಶಕ್ತಿ ಈ ದೃಶ್ಯಭಾಷೆಗೂ ಇದೆ.

ಪ್ರಪಂಚದಲ್ಲಿ ಅನೇಕ ದೇಶಗಳು ತಮ್ಮದೇ ಆದ ರಾಷ್ಟ್ರೀಯ ಭಾಷೆಯಲ್ಲಿ ಸಂವಹನ ಮಾಡುತ್ತವೆ. ಪರ ರಾಷ್ಟ್ರಗಳಿಗೆ ಅರ್ಥವಾಗುವುದು ಕಷ್ಟವಾದುದ್ದರಿಂದ ಪ್ರಾಂತೀಯ ಭಾಷೆಗಳಿಗಿಂತ ದೃಶ್ಯ ಭಾಷೆಯು ಅದ್ಭುತವಾದ ಕಾರ್ಯನಿರ್ವಹಿಸುವುದರಲ್ಲಿ ಪ್ರಥಮ ಸ್ಥಾನದಲ್ಲಿದೆ. ಪ್ರಪಂಚದಲ್ಲಿ ಎಲ್ಲರಿಗೂ ಎಲ್ಲಾ ಭಾಷೆಗಳು ಗೊತ್ತು ಎಂದು ಹೇಳುವುದು ಕಷ್ಟವಾದ ವಿಷಯ ಏಕೆಂದರೆ ಅದರಲ್ಲಿ ಬಹಳಷ್ಟು ಜನ ಅಕ್ಷರಸ್ಥರು ಮತ್ತು ಅನಕ್ಷರಸ್ಥರು ಇರುವರು, ಆದ್ದರಿಂದ ಏಕಕಾಲಕ್ಕೆ ಎಲ್ಲರಿಗೂ ಸರಳವಾಗಿ ಅರ್ಥವಾಗುವ ಭಾಷೆಯೆಂದರೆ ದೃಶ್ಯಭಾಷೆ ಎಂದು ದೃಢವಾಗಿ ಹೇಳಬಹುದು

ಉದಾಹರಣೆಗೆ: ವಾಣಿಜ್ಯಕ್ಷೇತ್ರದಲ್ಲಿ ದೊಡ್ಡ ದೊಡ್ಡ ನಗರಗಳಿಂದ ಹಿಡಿದು ಹಳ್ಳಿಯವರೆಗೂ ರಸ್ತೆಯ ಬದಿಯಲ್ಲಿ ಪೋಸ್ಟರ್‌ಗಳನ್ನು ಅಂಟಿಸಿರುತ್ತಾರೆ. ಪೋಸ್ಟರ್‌ನಲ್ಲಿ ಇರುವ ವಿಷಯ ಬಸ್ಸಿನಲ್ಲಿ ಕುಳಿತಿರುವವರಿಗೂ ಕ್ಷಣಾರ್ಧದಲ್ಲಿ ಸಂಪೂರ್ಣ ದೃಶ್ಯದ ಮೂಲಕ ಪೋಸ್ಟರ್‌ದಲ್ಲಿಯ ಮಾಹಿತಿ ಸಿಗುತ್ತದೆ. ಆದ್ದರಿಂದ ಇಂದು ಒಂದು ವೇಗದ ಸಂವಹನ ಮಾಧ್ಯಮವಾಗಿದೆ. ಇದೇ ರೀತಿ ವೈದ್ಯಕೀಯ ಕ್ಷೇತ್ರದಲ್ಲಿ ಕಣ್ಣು ತಪಾಸಣೆ ಮಾಡುವಾಗ, ಅನಕ್ಷರಸ್ಥರಿಗೆ ಚಿಹ್ನೆಗಳ ಮೂಲಕ ಅಥವಾ ದೃಶ್ಯಗಳ ಮೂಲಕ ಅವರಿಗೆ ಪರೀಕ್ಷೆ ಮಾಡುತ್ತಾರೆ. ಈ ರೀತಿಯಾಗಿ ಅನೇಕ ಕಡೆ ಚಿಹ್ನೆಗಳ ಮೂಲಕ ಸಂವಹನ ನಡೆಯುತ್ತದೆ.

**ದೃಶ್ಯ :** ಸರಳ, ಸುಂದರ, ಮನೋಹರ ಸನ್ನಿವೇಶವಾಗಿ ಕಾಣಿಸಲ್ಪಡುವುದು.

**ಭಾಷೆ :** ಮಾತು ಬಾಯಿಯಿಂದ ಮಾತನಾಡುವುದು ಕಿವಿಯಿಂದ ಕೇಳುವುದು, ಕಣ್ಣಿನಿಂದ ನೋಡುವುದು ಮತ್ತು ಓದುವುದು.

**ದೃಶ್ಯಭಾಷೆ :** ಕಣ್ಣಿನಿಂದ ನೋಡಿ, ಮನಸ್ಸಿನಿಂದ ಅನುಭವಿಸುವುದು.

ಎಲ್ಲಾ ಭಾಷೆಗಳಿಗೆ ಇರುವಂತೆ ದೃಶ್ಯ ಭಾಷೆಗೂ ಕೂಡ ತನ್ನದೆಯಾದ ರೀತಿಯ ಕಟ್ಟುನಿಟ್ಟುಗಳು ಇರುತ್ತವೆ. ಒಂದು ಚಿತ್ರದ ನಿರ್ಮಾಣಕ್ಕೆ ರೇಖೆ, ಬಣ್ಣಗಳು, ರೂಪ, ಆಕಾರಗಳ ಸಂಯೋಜನೆ ಕಲಾಕೃತಿಗೆ ವ್ಯಾಕರಣ ವಸ್ತುಗಳಾಗಿರುತ್ತವೆ ಎಂದು ಹೇಳಬಹುದು.

ಒಂದು ಕಲಾಕೃತಿ ಆಕಾರ ಪಡಯಬೇಕು ಎಂದರೇ ಎಲುಬಿನಂತೆ ರೇಖೆಗಳು ಅಥವಾ ಗೆರೆಗಳಿದ್ದರೆ, ಮಾಂಸ ಮತ್ತು ಚರ್ಮದಂತೆ ಬಣ್ಣಗಳಿರುತ್ತವೆ. ಈ ರೀತಿಯಾಗಿ ಒಂದು ಕಲಾಕೃತಿಯ ಶರೀರ ನಿರ್ಮಾಣವಾಗುವದರಲ್ಲಿ ಕಲಾವಿದನ ಆಶಯಗಳು ಕಲಾಕೃತಿಯ ಸಂಯೋಜನೆಗೆ ಸಹಾಯಕವಾಗುತ್ತವೆ. ಇದರಿಂದ ಒಂದು ಪೂರ್ಣ ಕಲಾಕೃತಿ ನಿರ್ಮಾಣವಾಗುತ್ತದೆ. ಕಲಾಕೃತಿಯನ್ನು ಇನ್ನಷ್ಟು ರಸಭರಿತವಾಗಲು "ರೂಪ ಭೇದಾ ಪ್ರಮಾಣಾ ನಿಗ್ಭಾವಲಾವಣ್ಯ ಯೋಜನವೇ ಸಾದೃಶ್ಯಂ ವರ್ಣಿಕಾಭಂಗ ಇತಿ ಚಿತ್ರಂ ಷಂಗಕಂ" ಈ ಸಿದ್ಧಾಂತವನ್ನು ತನ್ನ ಕಲಾಕೃತಿಯಲ್ಲಿ ಅಳವಡಿಸಿಕೊಳ್ಳುತ್ತಾನೆ.

### ಆ. ರೇಖಾ ಚಿತ್ರಗಳು

ಚಿತ್ರ ಎನ್ನುವುದು ಒಂದು ದೇಹವಾದರೆ ರೇಖೆ ಎನ್ನುವುದು ಅಸ್ಥಿಪಂಜರದಂತೆ ರೇಖೆ ಮಾನವ ಇತಿಹಾಸದಷ್ಟೇ ಪ್ರಾಚೀನವಾದುದು "ಗೆರೆ"ಯನ್ನು ರೇಖೆ ಎಂದಿದ್ದಾನೆ ಮಂಗ ರಾಜ ತನ್ನ ನಿಘಂಟುವಿನಲ್ಲಿ. ಸಂಸ್ಕೃತದ ರೇಖೆ ಕನ್ನಡದಲ್ಲಿ ಗೆರೆ ಅಥವಾ ಗೀಟು. ಇಂಗ್ಲೀಷಿನಲ್ಲಿ Drawing ಈ ಪದವನ್ನು ಚಿತ್ರವೇ ಅಲ್ಲವೇ ಅಲ್ಲದೇ ಬೇರೆ ಬೇರೆ ಸಂದರ್ಭದಲ್ಲಿ ವಿವಿಧ ಅರ್ಥದಲ್ಲಿ ಉಪಯೋಗಿಸಲಾಗಿದೆ. ಅಪ್ಪ ಹಾಕಿದ ಗೆರೆ ದಾಟುವುದಿಲ್ಲ ಗಾದೆ ಇಲ್ಲವೆ? ಹಾಗೆಯೇ ಲಕ್ಷ್ಮಣ ರೇಖೆ? ಅದೃಷ್ಟ ರೇಖೆ ಎಂಬ ಪದಗಳನ್ನು ಕೇಳಿದ್ದೇವೆ. ಹೀಗೆ ರೇಖೆ ನಮ್ಮ ಜೀವನದ ಅನೇಕ ಸಂದರ್ಭಗಳಲ್ಲಿ ಹಾಸು ಹೊಕ್ಕಾಗಿದೆ.

"ಕಲಾವಿದನೊಬ್ಬನನ್ನು ನಿಜಕ್ಕೂ ಬಯಲು ಮಾಡುವುದು ರೇಖಾ ಚಿತ್ರಗಳೇ. ಅವು ಅವನ ಸಹಿ ಇದ್ದಂತೆ" ಎನ್ನುವ ಮಾತುಂಟು ವ್ಯಕ್ತಿಯೊಬ್ಬನ ಕೈ ಬರವಣಿಗೆಯಂತೆಯೇ ರೇಖಾ ಚಿತ್ರವೊಂದು ಕಲಾವಿದನ ಆ ಸಂದರ್ಭದ ಚಿಂತನೆ ಮತ್ತು ಮನಃಸ್ಥಿತಿಗಳನ್ನು ಪ್ರತಿಬಿಂಬಿಸುತ್ತದೆ.

ರೇಖೆಯಲ್ಲಿ ಎರಡು ಮುಖ್ಯವಾದ ಪ್ರಕಾರಗಳಿವೆ. ಒಂದು ಸರಳ ರೇಖೆ ಇನ್ನೊಂದು ವಕ್ರರೇಖೆ ಈ ಸರಳ ಮತ್ತು ವಕ್ರರೇಖೆಯಲ್ಲಿ ಮತ್ತೆ ಹಲವು ವಿಧಗಳಿವೆ ಲಂಬ ರೇಖೆ, ಕ್ಷಿತಿಜರೇಖೆ, ಬಾಗುರೇಖೆ, ದಾಟುರೇಖೆ, ಕಂಪರೇಖೆ, ಗೊಂದಲಮಯ ರೇಖೆ, ವಲಯ ರೇಖೆ ದಪ್ಪರೇಖೆ, ನಾಜೂಕು ರೇಖೆ,

ಅಂಕುಡೊಂಕು ರೇಖೆ, ತುಂಡು ರೇಖೆ, ಗೀಚು ರೇಖೆ ಮುಂತಾದವು ಎಂದು ವರ್ಗೀ ಕರಿಸುತ್ತಾರೆ. ರೇಖೆಗಳಲ್ಲಿನ ಅಭಿವ್ಯಕ್ತಿ, ಸಾಮರ್ಥ್ಯ ಅಪರಿಮಿತವಾದುದು ಎಂದು ಉಲ್ಲೇಖಿಸುತ್ತಾ ಇದರಲ್ಲಿ ಮುಖ್ಯವಾಗಿ ಐದು ಅಂಶಗಳನ್ನು ಗುರುತಿಸುತ್ತಾರೆ. ೧. ರೇಖೆಯ ಭಾರ ೨. ರೇಖೆಯ ದಿಕ್ಕು ೩. ರೇಖೆಯ ಗುಣಧರ್ಮ ೪. ರೇಖೆಯನ್ನು ಚಿತ್ರಿಸಿದ ಮಾಧ್ಯಮ ೫. ರೇಖೆಯ ಮೇಲ್ಮೈ ವಿವಿಧ ಮಾಧ್ಯಮಗಳಲ್ಲಿ ಚಿತ್ರಿಸಿದ ರೇಖೆಗಳು ವಿಭಿನ್ನ ಗುಣಧರ್ಮಗಳನ್ನು ಹೊಂದಿರುತ್ತವೆ. ಅಷ್ಟೇ ಅಲ್ಲ ವಿಭಿನ್ನ ಪರಿಣಾಮಗಳನ್ನು ಮೂಡಿಸುತ್ತವೆ ಒಂದು ನೇರ ರೇಖೆ ಹಾಗೂ ಬಾಗಿದ ರೇಖೇ ಅಥವಾ ತೀವ್ರತೆಯಿಂದ ಬರೆದ ರೇಖೆ ಮತ್ತು ಮಂದಗತಿಯಿಂದ ಬರೆದ ರೇಖೆ ಅವುಗಳ ಸಂಯೋಜನೆ ಹಾಗೂ ಉತ್ಪತ್ತಿ ಮಾಡುವ ಭಾವನೆಗಳು, ಅರ್ಥಗಳು ಬೇರೆ ಬೇರೆಯಾಗಿರುತ್ತವೆ. ರೇಖೆಗಳಲ್ಲಿ ಜೀವಶಕ್ತಿ, ಚಲನ ಶೀಲತೆ, ಭಾವ ಪ್ರಕಾಶಗಳ ಸಂಗಮವನ್ನು ಕಾಣಬಹುದಾಗಿದೆ. ವೈವಿಧ್ಯಮಯ ಆಯಾಮಗಳನ್ನು ಹೊಂದಿದ ರೇಖೆಗಳನ್ನು ಬಳಸುವ ಕಲಾವಿದ ಅವುಗಳ ಮೂಲಕ ತನ್ನ ತುಡಿತಗಳನ್ನು ಅಭಿವ್ಯಕ್ತಿಸುವನು. ಹೀಗೆ ವೈವಿಧ್ಯಮಯ ರೇಖೆಗಳಿಂದ ಅಭಿವ್ಯಕ್ತಿಸಲ್ಪಟ್ಟಿದ್ದು, ಕಲಾಕೃತಿಗಳಲ್ಲಿ ಇವುಗಳೆಲ್ಲಾ ಅಡಗಿರುತ್ತವೆ.[೨]

ರೇಖೆಗಳ ಆಂತರಿಕ ಗುಣ ಹಾಗೂ ವ್ಯಕ್ತಿತ್ವ ಅರಿಯದೇ ಹಿಂದಿನ ಶತಮಾನಗಳಲ್ಲಿ ರೇಖಾ ಚಿತ್ರಕಲೆಯನ್ನು ಸೃಜನಶೀಲ ಅಭಿವ್ಯಕ್ತಿ ಮಾಧ್ಯಮ ಎಂದು ಒಪ್ಪಿಕೊಂಡಿರಲಿಲ್ಲ; ನಂತರ ಆಧುನಿಕ ಕಲಾ ಚಳುವಳಿಗಳು ಪಶ್ಚಿಮದ ದೇಶಗಳಲ್ಲಿ ತೀವ್ರಗೊಂಡಾಗ ರೇಖಾ ಚಿತ್ರವನ್ನೂ ಕೂಡಾ ಒಂದು ಪ್ರತ್ಯೇಕ ಅಭಿವ್ಯಕ್ತಿ ಮಾಧ್ಯಮವೆಂದು ಪರಿಗಣಿಸಲಾಯಿತು.

ದೇಸಾಯಿಯವರ ಕೆಲವೇ ರೇಖಾ ಚಿತ್ರಗಳು ದೊರೆತಿವೆ. ಅನ್ನ ಬಂದಿದೆ ಎಂದು ನೋಡಲು, ಒಂದು ಅನ್ನದ ಅಗುಳು ಇಚಿಕಿ ನೋಡಿದರೆ ಸಾಕು ಅನ್ನವಾಗಿದೆ ಎಂಬುವುದು ತಿಳಿಯುತ್ತದೆ. ಹಾಗೆ ದೇಸಾಯಿಯವರ ಉಪಲಬ್ಧ ಕೆಲವೇ ರೇಖಾಚಿತ್ರಗಳ ಮೇಲಿಂದ ಅವರ ಚಿತ್ರ ಸಾಮರ್ಥ್ಯ ತಿಳಿಯಬಹುದಾಗಿದೆ.

ಎಸ್.ಸಿ.ದೇಸಾಯಿಯವರು ಜೀವನದ ಉದ್ದಕ್ಕೂ ನೂರಾರು ಚಿತ್ರಗಳನ್ನು ರಚನೆ ಮಾಡಿದ್ದಾರೆ ಎನ್ನುವುದಕ್ಕೆ ಅವರ ನಾಲ್ಕು ಐದು ಚಿತ್ರಗಳೇ ಸಾಕ್ಷಿಯಾಗಿವೆ. ಅವರ ರೇಖೆಗಳು ಎಷ್ಟು ಪಕ್ವವಾಗಿದ್ದವು ಎಂದು ನೋಡಬಹುದಾಗಿತ್ತು.

## ಬ. ವರ್ಣ ಚಿತ್ರಗಳು

ವರ್ಣಗಳು ಮಾನವನ ಮನಸ್ಸಿನ ಮೇಲೆ ಪರಿಣಾಮ ಬೀರುವುದರ ಮೂಲಕ ಆತನ ಭಾವನಾತ್ಮಕ ವ್ಯಕ್ತಿತ್ವವನ್ನು ರೂಪಿಸುವಂತೆಯೇ ಆತನ ಆಂತರಿಕ ಅಭಿವ್ಯಕ್ತಿಯ ಬಾಹ್ಯರೂಪವಾದ ಕಲಾ ವಲಯದಲ್ಲಿಯೂ ಪ್ರಕಟಗೊಂಡು ಅವನ ಬಾಹ್ಯ ಬದುಕನ್ನು ನಿರ್ದೇಶಿಸುತ್ತವೆ.

ವರ್ಣ ಅಥವಾ ಬಣ್ಣಗಳ ಹುಟ್ಟಿನ ಬಗ್ಗೆ ಪೌರಾಣಿಕ ಮತ್ತು ವೈಜ್ಞಾನಿಕ ಸಂಗತಿಗಳನ್ನು ಪ್ರಾಚೀನ ಶಾಸ್ತ್ರ ಗ್ರಂಥಗಳು ಒಳಗೊಂಡಿವೆ. ಪಂಚಭೂತಗಳಿಂದ ಪಂಚವರ್ಣಗಳಾದ ಬಿಳಿ, ಕಪ್ಪು, ಹಳದಿ, ನೀಲಿ,

ಕೆಂಪುಗಳು ಉತ್ಪತ್ತಿಯಾದವು, ಶಿವನ ಪಂಚಮುಖಗಳಿಂದ ಈ ಐದು ವರ್ಣಗಳು ಹುಟ್ಟಿದವು, ಎಂಬುದಾಗಿ ಬಣ್ಣದ ಬಗ್ಗೆ ಅನೇಕ ಪೌರಾಣಿಕ ಕಲ್ಪನೆಗಳಿವೆ. ಇವುಗಳ ಜೊತೆಗೆ ವೈಜ್ಞಾನಿಕ ದೃಷ್ಟಿಕೋನದಿಂದ ನೋಡಿದಾಗ ಸೃಷ್ಟಿಯಲ್ಲಿಯ ಬೇರೆ ಬೇರೆ ಮೂಲ ವಸ್ತುಗಳಿಂದ ವಿವಿಧ ರೀತಿಯ ಬಣ್ಣಗಳನ್ನು ಪ್ರಾಚೀನರು ತಯಾರಿಸಿಕೊಳ್ಳುತ್ತಿದ್ದ ಬಗ್ಗೆ ತಿಳಿದು ಬರುತ್ತದೆ. ಪ್ರಾಚೀನರು ಬಣ್ಣಗಳನ್ನು ಖನಿಜಗಳು, ಸಸ್ಯಗಳು ಮತ್ತು ಪ್ರಾಣಿಗಳ ಮೂಲಗಳಿಂದ ಪಡೆದು ಕೊಳ್ಳುತ್ತಿದ್ದ ಬಗ್ಗೆ ಶೋಧನೆಗೊಂಡು ವರ್ಣ ಲೋಕದಲ್ಲಿ ಕ್ರಾಂತಿಯನ್ನೇ ಉಂಟು ಮಾಡಿದವು ಬಣ್ಣಗಳನ್ನು ಮಾನವರು ವಿವಿಧ ಉದ್ದೇಶಗಳಿಗೆ ಬಳಸುತ್ತಾರೆ. ಅಂತಹ ಉದ್ದೇಶಗಳಲ್ಲಿ ಚಿತ್ರಕಲೆಗಾಗಿ ಬಣ್ಣ ಬಳಸುವುದು ಅತ್ಯಂತ ಪ್ರಮುಖವಾದುದಾಗಿದೆ. ಚಿತ್ರಕಲೆಯ ಹುಟ್ಟು ಬೆಳವಣಿಗೆಯು ಒಂದು ರೀತಿಯಲ್ಲಿ ಪರೋಕ್ಷವಾಗಿ ಬಣ್ಣಗಳ ಹುಟ್ಟು ಬೆಳವಣಿಗೆಯನ್ನೆ ನಿರ್ದೇಶಿಸುತ್ತದೆ ಎಂದರೆ ತಪ್ಪಿಲ್ಲ. ಈ ಹಿನ್ನೆಲೆಯಲ್ಲಿ ಚಿತ್ರಕಲೆಯಲ್ಲಿ ಬಣ್ಣಗಳು ಬೆಳೆದು ಬಂದ ರೀತಿ ಸ್ಥೂಲವಾಗಿ ಗಮನಿಸಬಹುದು.

ಚಿತ್ರಕಲೆ ಪ್ರಾರಂಭಿಕ ಹಂತವನ್ನು ಪ್ರತಿನಿಧಿಸುವ ಆದಿ ಮಾನವ ಕಾಲದ ಬಂಡೆ ಚಿತ್ರಗಳಲ್ಲಿ ಬಣ್ಣಗಳ ವೈವಿಧ್ಯತೆ ಕಡಿಮೆ ಇದ್ದು ಮಿಶ್ರವರ್ಣಗಳ ಛಾಯೆಗಳು ಕಂಡುಬರುವದಿಲ್ಲ ಕೆಂಪು, ಹಳದಿ, ಬಿಳಿ ವರ್ಣಗಳ ಈ ಕಾಲದಲ್ಲಿ ಚಿತ್ರಕಲೆಗೆ ಹೆಚ್ಚಾಗಿ ಬಳಕೆಯಾಗಿದ್ದರೂ ಅಲ್ಲಲ್ಲಿ ಹಸಿರು ಮತ್ತು ಕಪ್ಪು ಬಣ್ಣಗಳೂ ಕಂಡು ಬಂದಿವೆ. ಈ ಹಂತದಲ್ಲಿ ಖನಿಜದ ಹರಳು ಸಸ್ಯ ಮತ್ತು ಪ್ರಾಣಿಗಳಿಂದ ಬಣ್ಣ ತಯಾರಿಸಿಕೊಳ್ಳುತ್ತಿದ್ದರು ಬಣ್ಣದ ಗಟ್ಟಿಗಳನ್ನು ಕುಟ್ಟಿಪುಡಿ ಮಾಡಿ ಆ ಪುಡಿಯನ್ನು ಯೋಗ್ಯ ಅಂಟುದ್ರಾವಕದಲ್ಲಿ ಕಲಸಿಕೊಂಡು ಚಿತ್ರಕ್ಕೆ ಲೇಪಿಸುತ್ತಿದ್ದರು. ಕೆಂಪು, ಹಳದಿ, ಬಿಳಿ, ಮಣ್ಣಿನ ಗಟ್ಟಿಗಳನ್ನು ಸಂಗ್ರಹಿಸಿ ಬಣ್ಣ ಪಡೆಯುತ್ತಿದ್ದರು.

ಕ್ರಿ.ಶ. ಆರಂಭದ ಕಾಲಕ್ಕೆ ಚಿತ್ರ ರಚನೆಯಲ್ಲಿ ಬದಲಾವಣೆಗಳಲ್ಲೂ ಪ್ರಗತಿ ಕಂಡುಬಂದಿತು. ಚಿತ್ರ ರಚನೆಗೆ ಶಾಸ್ತ್ರೀಯ ವಿಧಿ ವಿಧಾನಗಳು ರೂಪುಗೊಂಡಂತೆ ಬಣ್ಣಗಳ ತಯಾರಿಕೆಯಲ್ಲಿ ನಿರ್ಧಿಷ್ಟತೆ ಮತ್ತು ವಿಚಿತ್ರತೆಗಳು ಉಂಟಾದವು ಇದರಿಂದಾಗಿ ಬಣ್ಣಗಳ ವೈವಿಧ್ಯತೆಗಳು ಹೆಚ್ಚಿದವು. ಈ ಸಂದರ್ಭದಲ್ಲಿ ಖನಿಜ, ಸಸ್ಯ ಮತ್ತು ಪ್ರಾಣಿ ಮೂಲಗಳ ಜೊತೆಗೆ ಲೋಹ ಮೂಲಗಳಿದಂಲೂ ಬಣ್ಣಗಳನ್ನು ತಯಾರಿಸಿಕೊಳ್ಳತೊಡಗಿದರು. ಇದಕ್ಕಾಗಿ ಬಂಗಾರ, ಬೆಳ್ಳಿ, ತಾಮ್ರ, ಸತುವು, ಸೀಸ, ಅಬ್ರಕ ಮುಂತಾದ ಲೋಹಗಳನ್ನು ಬಳಸಿದರು. ಕೆಲವು ಲೋಹಗಳನ್ನು ನಿರ್ಧಿಷ್ಟ ಪ್ರಮಾಣದಲ್ಲಿ ಕಾಯಿಸುವ ಮೂಲಕ ಬಣ್ಣ ತಯಾರಿಸುತ್ತಿದ್ದರು.

ಆದಿ ಮಾನವನ ಕಾಲದಿಂದಲೇ ಗುಹೆಗಳಲ್ಲಿ ರೇಖಾ ಹಾಗೂ ವರ್ಣಚಿತ್ರಗಳ ರಚನೆಯಾಗಿರುವುದನ್ನು ಕಾಣಬಹುದು. ಇದಲ್ಲದೆ ಅಜಂತಾದ ಗುಹೆಗಳಲ್ಲಿಯೂ ವರ್ಣಚಿತ್ರಗಳನ್ನು ಕಾಣಬಹುದು. ಇದೇ ರೀತಿಯಾಗಿ ರಾಜಮನೆತನಗಳಲ್ಲಿ ಹಲವಾರು ಕಲಾವಿದರಿಗೆ ಆಶ್ರಯವನ್ನು ನೀಡಿದ್ದರು. ಈ ಹಂತದಲ್ಲಿ ವರ್ಣಚಿತ್ರಗಳು ಹೆಚ್ಚಿನ ಪ್ರಮಾಣದಲ್ಲಿ ರಚನೆಗೊಂಡವು. ಹೀಗೆ ರಾಜಾಶ್ರಯವನ್ನು ಪಡೆದು ಹಲವಾರು ಚಿತ್ರಕಲಾವಿದರು ರಾಜಮನೆತನದ, ರಾಜದರ್ಬಾರಿನ, ಅರಮನೆಯ ಚಿತ್ರಗಳು, ರಾಜ ಮಹಾರಾಜರ

ಭಾವಚಿತ್ರಗಳು, ಪೂರ್ಣ ಪ್ರಮಾಣದ ಜೀವ ಮಾದರಿಯ ಕಲಾಕೃತಿಗಳು ಹೆಚ್ಚಿನ ಪ್ರಮಾಣದಲ್ಲಿ ರಚನೆಗೊಂಡವು.

ಕ್ರಿ.ಶ. ೧೮ನೇ ಶತಮಾನದವರೆಗೂ ಇದೇ ರೀತಿಯ ಪ್ರಾಕೃತಿಕ ವಸ್ತುಗಳಿಂದಲೇ ಬಣ್ಣ ಪಡೆಯುವ ಪದ್ಧತಿ ಇತ್ತು. ಮುಂದೆ ರಾಸಾಯನಿಕ ಸಿದ್ಧವರ್ಣಗಳು ವೈವಿಧ್ಯತೆಯನ್ನು ಉಂಟು ಮಾಡಿದವು. ಹಲವಾರು ಸಂಶೋಧನೆಗಳ ಫಲವಾಗಿ ತೈಲವರ್ಣ, ಜಲವರ್ಣ, ಅಕ್ರಾಲಿಕ್, ಡಾಂಬರ್ ಮೂಲದ ವರ್ಣಗಳು ಹೀಗೆ ವಿವಿಧ ರೀತಿಯ ವರ್ಣಗಳು ಚಿತ್ರಕಲೆಯಲ್ಲಿ ಬಳಕೆಗೆ ಬಂದವು. ಇದರಿಂದಾಗಿ ಚಿತ್ರಕಲಾ ಕ್ಷೇತ್ರವು ಪ್ರತಿಯೊಬ್ಬ ಕಲಾವಿದರಿಗೆ ಕೃತಿ ರಚನೆಯ ಸಂದರ್ಭದಲ್ಲಿ ಬಣ್ಣಗಳ ಮಾಧ್ಯಮಗಳ ಆಯ್ಕೆಯಲ್ಲಿ ಸ್ವಾತಂತ್ರ್ಯವನ್ನು ಕೊಟ್ಟಿತು.

ಚಿತ್ರಕಲೆಯಲ್ಲಿ ಪ್ರತಿಯೊಂದು ಬಣ್ಣಗಳ ಮಾಧ್ಯಮಗಳೂ ತನ್ನದೇ ಆದ ಇತಿಮತಿಗಳನ್ನು ಹೊಂದಿ ಇತರ ಬಣ್ಣಗಳಿಗಿಂತ ಭಿನ್ನವಾಗಿ ನಿಂತವು. ತೈಲವರ್ಣ ರಚನೆಗೆ ತೈಲ, ಜಲ ವರ್ಣಕ್ಕೆ ನೀರು ಇಲ್ಲದೆ ರಾಸಾಯನಿಕ ದ್ರವ, ಅದೇ ರೀತಿ ಫ್ಯಾಬ್ರಿಕ್ ಕಲರಿಗೆ ಸೂಕ್ತವಾದ ರಾಸಾಯನಿಕ ದ್ರವಗಳನ್ನು ಬಳಸುವುದು ರೂಢಿಗೆ ಬಂತು. ಅಲ್ಲದೆ ಪ್ರತಿಯೊಂದು ವರ್ಣಮಾಧ್ಯಮದ ಹೊಳಪು, ಛಾಯೆ, ಗುಣಧರ್ಮಗಳು ಭಿನ್ನವಾಗಿರುವುದು ಬಳಸುವ ಮಾಧ್ಯಮದಿಂದಲೇ ಎನ್ನಬೇಕು.

ನಮ್ಮ ಚಿತ್ರಕಲೆಯಲ್ಲಿ ಬಣ್ಣಗಳ ಪಾತ್ರ ಬಹು ಮೂಲ್ಯವಾದುದಾಗಿದೆ. ಇಲ್ಲಿ ಬಣ್ಣಗಳೇ ನೋಡುಗನ ಭಾವನಾತ್ಮಕ ಅಭಿವ್ಯಕ್ತಿಗೆ ನೇರವಾಗಿ ತಲುಪುತ್ತವೆ. ಕೆಲವು ಕಲಾವಿದರಂತೂ ನೇರವಾಗಿ ಬಣ್ಣಗಳ ಲೇಪನವನ್ನೇ ಕ್ಯಾನವಾಸ್ ಮೇಲೆ ಕೈಗೊಳ್ಳುತ್ತಾರೆ. ಆಧುನಿಕ ಕಲೆಯ ಜೀವಾಳವೇ ಬಣ್ಣಗಳಾಗಿದೆ ಎಂದರೆ ತಪ್ಪಿಲ್ಲ.

ಬ್ರಿಟಿಷರ ಆಗಮನದಿಂದಾಗಿ ನಮ್ಮ ದೇಶದಲ್ಲಿ ಕಲಾಕೃತಿಗಳ ಮೇಲೆ ಪಾಶ್ಚಾತ್ಯರ ಪ್ರಭಾವವು ಹೆಚ್ಚಾಗುತ್ತಿತ್ತು. ಕಾರಣ ಅವರು ಕಲಾಶಾಲೆಗಳನ್ನು ಹುಟ್ಟುಹಾಕಿದ್ದರು. ಅಲ್ಲದೆ ಪಠ್ಯಕ್ರಮ ಪಾಶ್ಚಾತ್ಯರದೇ ಆಗಿತ್ತು. ಆಗ ಭಾರತೀಯ ಸಾಹಿತ್ಯ ಪ್ರಪಂಚದಲ್ಲಿ ನವೋದಯ ಕಾಲ. ಅವನೀಂದ್ರನಾಥ ಟ್ಯಾಗೂರ್‌ರು ದೇಶೀಯ ಕಲಾ ವಾತಾವರಣ ಮೂಡಿಸುವ ಪ್ರಯತ್ನದಲ್ಲಿದ್ದರು.

ರವಿವರ್ಮನ ಅನೇಕ ವರ್ಣಕಲಾಕೃತಿಗಳ ಮೇಲೆ ಪಾಶ್ಚಾತ್ಯರ ಪ್ರಭಾವ ಆಗಿದೆ. ಭಾರತದಲ್ಲಿ ಆಧುನಿಕ ಶೈಲಿಯ ವರ್ಣ ಚಿತ್ರಗಳು ರವಿವರ್ಮನಿಂದ ರೂಪುಗೊಂಡಿದ್ದು ನಂತರ ಅನೇಕ ಕಲಾವಿದರು ವರ್ಣ ಚಿತ್ರರಚನೆ ಮಾಡಿರುವುದನ್ನು ನೋಡಬಹುದು.

ಎಸ್.ಜಿ.ದೇಸಾಯಿಯವರ ಕಲಾಕೃತಿಗಳು ಆಧುನಿಕವಾದರೂ ದೇಶೀಯತೆಯ ಸೊಗಡನ್ನು ಹೊಂದಿವೆ. ಇವರು ಕ್ರಿಯಾಶೀಲರಾಗಿದ್ದು ಪ್ರಯೋಗ ಶೀಲರೂ ಕೂಡ ಆಗಿದ್ದರು ಎಂಬುದು ಇವರ ಕಲಾ ಕೃತಿಗಳನ್ನು

ನೋಡಿದರೆ ಗೊತ್ತಾಗುತ್ತದೆ. ಬದುಕಿಗೆ ಎಷ್ಟು ಹತ್ತಿರವಾಗಿದ್ದರು ಎಂಬ ವಿಷಯ, ಇದರಲ್ಲಿ ಅವರು ಹುಟ್ಟಿ ಬಂದ ಪರಿಸರ ಮತ್ತು ಸಂಪ್ರದಾಯಿಕವಾದ ಜೀವನ, ಧಾರ್ಮಿಕ, ಆಧ್ಯಾತ್ಮಿಕ, ಸಾಮಾಜಿಕ ಇತ್ಯಾದಿ ಚಟುವಟಿಕೆಗಳು. ಜೊತೆಗೆ ಅವರ ಕಲಾಕೃತಿಗಳು ಅವರ ಬದುಕಿನ ಕನ್ನಡಿಯಾಗಿದ್ದವು ಎಂದು ಹೇಳಬಹುದು.

## ಕ. ಸೃಜನಾತ್ಮಕ ಸಂಯೋಜನೆ

ಸೃಜನಶೀಲತೆಯೆಂಬುದು ಒಂದು ಪ್ರಜ್ಞೆ. ಈ ಪ್ರಜ್ಞೆ ಹೊಸ ಹೊಸ ವಿಷಯಗಳನ್ನು ಹೊಳೆಯುವಂತೆ ಮಾಡುವ ಒಂದು ಶಕ್ತಿ ಇದನ್ನೇ ಪ್ರತಿಭೆ ಎನ್ನಬಹುದು.

ಚಿತ್ರಕಲೆಯಲ್ಲಿ ಸಂಯೋಜನೆಗೆ ಬಹುಮುಖ್ಯ ಪಾತ್ರವಿದೆ. ಯೋಜನಾಬದ್ಧ ಸಂಯೋಜನಾ ತಂತ್ರದಿಂದ ಒಂದು ಕಲಾಕೃತಿ ತನ್ನ ಉತ್ಕೃಷ್ಟತೆಯನ್ನು ಹೆಚ್ಚಿಸಿ ಕೊಳ್ಳುತ್ತದೆ. ಚಿತ್ರಕಲೆಯಲ್ಲಿ ಸಂಯೋಜನೆಯು ಅದರ ವ್ಯಾಕರಣವಿದ್ದಂತೆ. ಲಭ್ಯ ಅಳತೆಯಲ್ಲಿ ಚಿತ್ರಗಳನ್ನು ಯಾವ ಪ್ರಮಾಣದಲ್ಲಿ ರಚಿಸಬೇಕು. ಯಾವ ಭಾಗದಲ್ಲಿ ಆಕಾರಗಳನ್ನು ಚಿತ್ರಿಸಬೇಕು, ಹಿಂಭಾಗ, ಮುಂಭಾಗ, ಮೇಲೆ, ಕೆಳಗೆ ಎಡ ಮತ್ತು ಬಲಭಾಗ ಹೀಗೆ ಬೇರೆ ಬೇರೆ ಸ್ಥಳಾವಕಾಶದಲ್ಲಿ ಏನೇನು ರಚಿಸಬೇಕು, ವಿಷಯಕ್ಕೆ ತಕ್ಕಹಾಗೆ ಇರುವಂತೆ ಪರಿಸರ ಮತ್ತು ವಸ್ತುಗಳ ರಚನೆ, ಯೋಗ್ಯವಾದ ಮತ್ತು ಸಮತೋಲನವಾದ ಬಣ್ಣದ ಲೇಪನ ಮುಂತಾದ ಸಂಗತಿಗಳು ಸಂಯೋಜನೆಯ ವ್ಯಾಪ್ತಿಯಲ್ಲಿ ಒಳಗೊಳ್ಳುತ್ತವೆ. ವ್ಯಕ್ತಿ ಚಿತ್ರಣ, ನಿಸರ್ಗ ಚಿತ್ರಣ, ವಸ್ತುಚಿತ್ರಣ, ಹೀಗೆ ಯಾವುದೇ ಚಿತ್ರಣ ಇದ್ದರೂ ಅದರಲ್ಲಿ ಸಂಯೋಜನೆ ಬಹು ಮುಖ್ಯ ಪಾತ್ರವಹಿಸುತ್ತದೆ.

ಚಿತ್ರಕಲೆಯಲ್ಲಿ ಸಂಯೋಜನೆಯನ್ನು ಕಾಲಕಾಲಕ್ಕೆ ವಿವಿಧ ರೀತಿಯಿಂದ ಬಳಸಿಕೊಂಡು ಬರಲಾಗಿದೆ. ಪ್ರಾಗೈತಿಹಾಸ ಕಾಲದ ಚಿತ್ರಕಾರರು ಬಂಡೆಗಳ ಮೇಲೆ ಚಿತ್ರರಚನೆ ಮಾಡಿದ್ದು ಬಂಡೆಗಳ ಮೇಲ್ಮೈಗನುಸಾರವಾಗಿ ಚಿತ್ರಗಳನ್ನು ಹೊಂದಾಣಿಕೆ ಮಾಡಿ ರಚಿಸಿದ್ದು ಕೆಲವು ಕಡೆಗಳಲ್ಲಿ ಕಂಡುಬರುತ್ತದೆ. ನಂತರದ ಭಿತ್ತಿ ಚಿತ್ರಕಲಾವಿದರು ಗೋಡೆಗಳ ಮೇಲೆ ರಚಿಸುತ್ತಿದ್ದ ದೊಡ್ಡ ಪ್ರಮಾಣದ ಚಿತ್ರಗಳಲ್ಲಿ ಯೋಜನಾ ಬದ್ಧವಾದ ಸಂಯೋಜನೆಯನ್ನು ಅಳವಡಿಸಿಕೊಂಡಿರುವುದು ಕಂಡುಬರುವುದು. ಅಜಂತಾ ಭಿತ್ತಿಚಿತ್ರಗಳಲ್ಲಿ ಇದಕ್ಕೆ ಸ್ಪಷ್ಟ ನಿದರ್ಶನ ಕಂಡು ಬರುವುದು. ಅಲ್ಲಿ ವಿಶಾಲವಾದ ಗೋಡೆಗಳಲ್ಲಿ ಸಾಲಾಗಿ ವಿವಿಧ ವಿಷಯಗಳಿಗೆ ಸಂಬಂಧಿಸಿದ ಚಿತ್ರಗಳನ್ನು ರಚಿಸಲಾಗಿದೆ. ಒಂದು ಚಿತ್ರ ಮತ್ತು ಇನ್ನೊಂದು ಚಿತ್ರವನ್ನು ಪ್ರತ್ಯೇಕಿಸುವಲ್ಲಿ ಯಾವುದೇ ವಿಭಾಜಕವು ಅಲ್ಲಿಲ್ಲ ಹಾಗಾಗಿ ಒಂದು ವಿಷಯದಲ್ಲಿ ಮತ್ತೊಂದು ವಿಷಯದ ಚಿತ್ರಗಳು ಬೆರೆತುಕೊಂಡಂತೆ ಬರುತ್ತದೆ.

ಎನ್.ಸಿ.ದೇಸಾಯಿಯವರು ಸೃಜನಶೀಲ ಕಲಾವಿದ ಎಂದು ಹೇಳಲು ಅವರ ವರ್ಣ ಚಿತ್ರಗಳಲ್ಲಿ ಇರುವ ವೈವಿಧ್ಯಮಯ ವಿಷಯತಂತ್ರ ಇತ್ಯಾದಿಗಳೇ ಕಾರಣ ಎಂದು ಹೇಳಬಹುದು. ಅವರ ವರ್ಣ ಚಿತ್ರಗಳನ್ನು ಈ ರೀತಿಯಲ್ಲಿ ವಿಂಗಡಿಸಬಹುದು.

೧. ಕಾವ್ಯ ಕುರಿತು ಚಿತ್ರಗಳು

೨. ಸಂಪ್ರದಾಯಿಕ ಶೈಲಿಯ ವರ್ಣಚಿತ್ರಗಳು

೩. ರೂಪಭಾವ ಚಿತ್ರಗಳು

೪. ವ್ಯಕ್ತಿ ಮತ್ತು ಐತಿಹಾಸಿಕ, ಧಾರ್ಮಿಕ ಮಹಾ ಪುರುಷರ ವರ್ಣಚಿತ್ರಗಳು

೫. ವಿಶ್ವವ್ಯಾಪಿ ಗಣೇಶನ ಚಿತ್ರಗಳು

೬. ದೇವತಾ ಚಿತ್ರಗಳು

೭. ನಿಸರ್ಗ ವರ್ಣಚಿತ್ರಗಳು

೮. ಮುಖಪುಟ ವಿನ್ಯಾಸ ಮತ್ತು ಕ್ಯಾಲೆಂಡರ್ ವಿನ್ಯಾಸಗಳು

೯. ಸಂಯೋಜನ ವರ್ಣಚಿತ್ರಗಳು

೧೦. ಕ್ಯಾಮರಾ ಕಣ್ಣಿನಿಂದ ಮೂಡಿದ ಛಾಯಾಚಿತ್ರಗಳು

೧. ಕಾವ್ಯ ಕುರಿತು ವರ್ಣಚಿತ್ರಗಳು

ಎನ್.ಸಿ.ದೇಸಾಯಿಯವರಿಗೆ ಬೇಂದ್ರೆಯಾಗಲಿ ಅವರ ಕವಿತೆಗಳಾಗಲಿ ಎಷ್ಟು ಇಷ್ಟವೆಂದು ಹೇಳಲು ಅದಕ್ಕೆ ಪ್ರತ್ಯಕ್ಷ ಸಾಕ್ಷಿ ಎಂದರೆ ಬೇಂದ್ರೆಯವರ ಕವಿತೆಗೆ ಎನ್.ಸಿ.ದೇಸಾಯಿಯವರು ರಚನೆ ಮಾಡಿದ ಕಲಾಕೃತಿಗಳೇ

ಹಾರಗುದರೀ ಬೆನ್ನ ಏರಿ!
ಸ್ವಾರರಾಗಿ ಕೂತು ಹಾಂಗs
ದೂರ ದೂರಾ ಹೋಗೋಣಾಂತ!
ಯಾರಿಗೂ ಹೇಳೋಣು ಬ್ಯಾಡಾ.

ಅತಿವೇಗದಲ್ಲಿ ಓಡಬಲ್ಲ ಕುದುರೆಯ ಬೆನ್ನ ಮೇಲೆ ಹಾರಿಕೂತು, ಅದನ್ನು ದೂರದೂರಕ್ಕ ಓಡಿಸಿಕೊಂಡು ಹೋಗುವ ಇಚ್ಛೆ ಎಲ್ಲರಿಗೂ ಇರುತ್ತದೆ. ಆದರೆ ಯಾರಿಗೆ ಸಾಧ್ಯ ಕಲ್ಪನಾ ಕುದುರೆ ಹತ್ತಿ ಕಾಲ್ಪನಿಕ ಪ್ರವಾಸ ಮುದ್ದು ಎಲ್ಲಾರು ಆನಂದದಾಯಕವೇ.

ಯಾವುದೋ ಒಂದು ತೋಟಕ್ಕೆ ಹೋಗಿ ಆದರೆ ಈ ಕ್ರಿಯೆ ಇನ್ನೊಬ್ಬರಿಗೆ ತಿಳಿದರೆ ಆನಂದಕ್ಕೆ ಬಾಧೆ.

ಹಾವಿನ ಮರಿಯಾಗಿ ಅಲ್ಲಿ
ನಾವುನೂ ಹೆಡೆಯಾಡಿ ಸೋಣು
ಹೂವೆ ಹೂವು ಹಸಿರ ಹಸಿರ್‍ |
ಯಾರಿಗೂ ಹೇಳೋಣು ಬ್ಯಾಡಾ.

ಹಾವು ಭಯದ ಸಂಕೇತ ಹಾವಿನಂತೆ ತಲೆದೂಗುವುದು ಆನಂದದಾಯಕ. ಇದೊಂದು ಅಪ್ರತ್ಯಕ್ಷ ಆನಂದದ ಬಗ್ಗೆ. ಹೂ ಮತ್ತು ಹಸಿರು ಇದ್ದಲ್ಲಿ ಹಾವಿನ ಸಂಚಾರ ಸಾಮಾನ್ಯ. ಅವುಗಳನ್ನು ಕಂಡು ಭಯಭೀತರಾಗುವವರೇ ಹೆಚ್ಚು ಮಂದಿ ಹಾವು ಇಲ್ಲದೇ ಹಾವಿನಂತೆ ಹೆಡೆಯಾಡಿಸಿ ಸುಖಪಡೆಯುವ ಆನಂದ ಕ್ರಿಯ ಇಲ್ಲಿದೆ.

ಮಲ್ಲಿಗೀ ಮಂಟಪದಾಗ
ಗಲ್ಲ ಗಲ್ಲ ಹಚ್ಚಿ ಕೂತು
ಮೆಲ್ಲ ದನಿಲೆ ಹಾಡೋಣಂತ |
ಯಾರಿಗೂ ಹೇಳೋಣು ಬ್ಯಾಡಾ.

ಮಲ್ಲಿಗೀ ಮಂಟಪದಲ್ಲಿ ಗಲ್ಲಗಲ್ಲ ಹಚ್ಚಿ ಕೂತು ಮೆಲ್ಲದನಿಯಿಂದ ಹಾಡುವುದು ಎಲ್ಲರಿಗೂ ಆನಂದದಾಯಕ. ನೂತನ ದಂಪತಿಗಳಿಗೂ ಇನ್ನಷ್ಟು ಆನಂದದಾಯಕ ಆದರೆ ಈ ಕ್ರಿಯೆ ಗುಪ್ತವಾಗಿರಬೇಕು.

ಅಂತರಂಗದ ಭಾವ ಬಹಿರಂಗದಲ್ಲಿ ಬರಲು ನಾಚುತ್ತದೆ.

ಎನ್.ಸಿ.ದೇಸಾಯಿಯವರ ಈ ಚಿತ್ರಗಳು ೨೦೦೦ ರಲ್ಲಿ ರಚನೆ ಮಾಡಿದರು. ೨೦೦೧ ರಲ್ಲಿ ಕರ್ಮವೀರ ದೀಪಾವಳಿ ವಿಶೇಷಾಂಕದಲ್ಲಿ ಪ್ರಕಟವಾದ ಅಂಬಿಕಾತನಯದತ್ತರ 'ಯಾರಿಗೂ ಹೇಳೋಣು ಬ್ಯಾಡಾ' ಎಂದು ತಲೆ ಬರಹ ಲೇಖನದಲ್ಲಿ ಚಿತ್ರಗಳು ಪ್ರಕಟವಾಗಿದೆ.

ಈ ಕವಿತೆಯನ್ನು ಕುರಿತು ಆರು ಚಿತ್ರಗಳನ್ನು ನಿರ್ಮಾಣ ಮಾಡಿದ್ದಾರೆ. ಬೇಂದ್ರೆಯವರ ಮನಸ್ಸಿನ ನುಡಿಗಳನ್ನು ಎನ್.ಸಿ.ದೇಸಾಯಿಯವರು ತಮ್ಮ ಕಲಾಕೃತಿಯ ಫ್ರೇಮ್‌ನಲ್ಲಿ ಕಟ್ಟಿ ಹಾಕಿದ್ದಾರೆ. ಈ ಕಲಾಕೃತಿಗಳನ್ನು ನೋಡಿದರೆ ಯಾರಿಗೂ ಹೇಳೋಣು ಬ್ಯಾಡಾ. ಎಂಬುವುದಾಗಿ ಪದ್ಯವೇ ಹೇಳುತ್ತದೆ.

ಈ ಕಲಾಕೃತಿಗಳ ನಿರ್ಮಾಣಕ್ಕೆ ಜಲವರ್ಣಗಳನ್ನು ಬಳಸಿದ್ದಾರೆ.

ಪ್ರೇಮದಿಂದ ನೀ ಕಳುಹಿದ ಬೀಸಣಿಕ ಬೀಸಿದ ಗಾಳಿ|

ಕಳೇಯಿತೇನೋ ವಿರಹತಾಪವ, ಆದರೆ ಮೈಗೆ ಬೀವರ ಗಾಳಿ | (ಕಾಳಿದಾಸ)

ಪ್ರೇಮದಿಂದ ನೀ ಕಳಿಸಿದ ಬೀಸಣಿಕೆಯಿಂದ ಬೀಸಿದ ಗಾಳಿ ವಿರಹತಾಪನ ಕಳೆಯಿತು ಆದರೆ ಮೈಗೆ ಬವರ ದಾಳಿಯಿತ್ತು ಎಂದು ಹೇಳುತ್ತಿದೆ. ಈ ಚಿತ್ರ ಎನ್.ಸಿ.ದೇಸಾಯಿಯವರ ಕವಿತೆಯ ಸಾಲುಗಳನ್ನು ಇಟ್ಟುಕೊಂಡು ಅದಕ್ಕೆ ತಕ್ಕ ರೀತಿಯಲ್ಲಿ ಚಿತ್ರ ಬಿಡಿಸುವುದರಲ್ಲಿ ಸಿದ್ಧಹಸ್ತರು. ಈ ಚಿತ್ರವನ್ನು ಜಲವರ್ಣದಿಂದ ಮಾಡಿದ್ದಾರೆ.

ಇಮ್ಮನವಾದಳು, ಚಲಿಸಳು, ನಗಳು, ಇಲ್ಲ ಕೆಂಡಕಾರಿ |

ನಲ್ಲ ಬರೆದ ಚಿತ್ರವ ಕಂಡು ಚಿತ್ರದಂತಿಹಳು ನಾರಿ || (ಕಾಳಿದಾಸ)

ಎನ್.ಸಿ.ದೇಸಾಯಿಯವರು ಬರೆದ ಈ ಚಿತ್ರದಲ್ಲಿ ಚಿತ್ರವನ್ನು ನೋಡಿ ಚಿತ್ರದಲ್ಲಿ ಇರುವ ನಾರಿ ಈ ಚಿತ್ರವು ಸಹ ಜಲವರ್ಣ ದಿಂದ ಮೂಡಿ ಬಂದಿದೆ.

ಕವಿ ಜಯದೇವ ಅವರ ಕಾವ್ಯಕ್ಕೆ ಕಲಾಪಿದ ಎನ್.ಸಿ.ದೇಸಾಯಿಯವರು ರಚಿಸುತ್ತಿಗುವ ಕಲಾಕೃತಿ.

ಎನ್.ಸಿ.ದೇಸಾಯಿಯವರ ಆದಿತ್ಯ ಸ್ಟುಡಿಯೋದಲ್ಲಿ ವಾಣಿಜ್ಯ ಕೃತಿಗಳನ್ನು ರಚನೆ ಮಾಡುತ್ತಿದ್ದ "ನನ್ನ ಹೊಟ್ಟೆಪಾಡಿಗೆ" ಎಂದು ಹೇಳುತ್ತಿದ್ದರು. ಅದರ ಜೊತೆಗೆ ಆಧ್ಯಾತ್ಮಿಕ ಕಲಾಕೃತಿಗಳನ್ನು ರಚನೆ ಮಾಡುತ್ತಿದ್ದರು. ಅವು ಆತ್ಮದ ಆನಂದಕ್ಕೆ ಎಂದು ಹೇಳುತ್ತಿದ್ದರು ಅದರಲ್ಲಿ ಒಂದು ಜಯದೇವನ ಗೀತಗೋವಿಂದವನ್ನು ಆಧರಿಸಿ ದೇಸಾಯಿಯವರು ರಚಿಸುತ್ತಿರುವ ಚಿತ್ರ. ಈ ಚಿತ್ರವನ್ನು ಪೋಸ್ಟರ್ ಮಾಧ್ಯಮದ ಮುಖಾಂತರ ರಚಿಸಲಾಗಿದೆ.

**ದ.ರಾ.ಬೇಂದ್ರೆಯವರ ಕವಿತೆ ಮೇಘದೂತ**

ಎನ್.ಸಿ.ದೇಸಾಯಿಯವರು ರಚನೆ ಮಾಡಿದ ಕಲಾಕೃತಿಯಲ್ಲಿ ಕಾಳಿದಾಸ ಕವಿತೆ ರಚನೆ ಮಾಡುತ್ತಿದ್ದಾನೆ. ಬೇಂದ್ರೆ ಮೇಘದೂತವಾಗಿದ್ದಾರೆ. ಈ ಚಿತ್ರವನ್ನು ೨೫.೭.೧೯೯೨ರಲ್ಲಿ ರಚನೆ ಮಾಡಿದ್ದಾರೆ. ಈ ಚಿತ್ರಕ್ಕೆ ಜಲವರ್ಣಗಳನ್ನು ಬಳಸಲಾಗಿದೆ.

**ಮಾಲೆ ಕಟ್ಟುತ್ತಿರುವ ಯುವತಿ**

ನೀನೆ ಒಂದು ಕುಸುಮವಾಗಿ,
ಕುಸುಮಗಳನ್ನು ಕಟ್ಟಿ,
ಯಾರಿಗೆ ಮಾಲೆ ಹಾಕಲು
ಲೆಕ್ಕವಾಕುತ್ತಿದ್ದೆಯೆ ನೀ ವೈಯ್ಯಾರಿ

ಈ ಕಲಾ ಕೃತಿಯಲ್ಲಿ ಎನ್.ಸಿ.ದೇಸಾಯಿಯವರ ಪರಿಪಕ್ವವಾದ ಕಲಾ ಶೈಲಿಯು ಕಂಡು ಬರುತ್ತದೆ. ಇದರಲ್ಲಿ ಮಾಲೆ ಕಟ್ಟುತ್ತಿರುವ ಯುವತಿ ತಾನೇ ಒಂದು ಸುಂದರವಾದ ಹೂವು ಎಂಬುವುದನ್ನು ಮರೆತು. ಹೂವಿನ ಮಾಲೆ ಕಟ್ಟಿ ಮಾಲೆ ಲೆಕ್ಕವಾಕುತ್ತಿದ್ದಾಳೆ. ಈ ಚಿತ್ರದ ವರ್ಣಗಳು ಒಂದು ಸಿಹಿಯಾದ ಅನುಭವವನ್ನು ನೀಡುತ್ತವೆ. ಈ ಚಿತ್ರವು ಆಧುನಿಕವಾದರೂ ಇದರಲ್ಲಿ ಸಾಂಪ್ರದಾಯಿಕ ಭಾಷೆ ಸಾಹಿತ್ಯವಿದೆ. ಈ ಕಲಾಕೃತಿಯ ಮಾಧ್ಯಮ ಪೋಸ್ಟರ್ ಬಣ್ಣಗಳಿಂದ ಮಾಡಿದ್ದಾರೆ. ಇದರಲ್ಲಿ ರೂಪ, ಲಾವಣ್ಯಗಳ ಜೊತೆಗೆ ಪ್ರಮಾಣಬದ್ಧವಾಗಿದೆ.

**ಕೊಡ ಹೊತ್ತ ಮಹಿಳೆ**

ನೆತ್ತಿ ಮ್ಯಾಗ, ಕೊಡ ಹೊತ್ತು
ಎಲ್ಲಿಗೆ ಹೊಂಟಿಯಾ ಜೇ

ಈ ಭಾರತೀಯ ಸಂಸ್ಕೃತಿಯನ್ನು ತನ್ನದಾಗಿ ಮಾಡಿಕೊಂಡು ನೀರಿಗೆ ಹೊರಟ ಆಕೆ, ನೇರ ನೋಟದಿಂದ ನೋಡುತ್ತಾಳೆ. ಶೃಂಗಾರ ಮಾಡಿಕೊಂಡು ಹೊರಡಲು ಈ ಚಿತ್ರವು ಕೊಡದಲ್ಲಿ ನೀರು ತುಂಬಿ ತುಳುಕದಿದ್ದರೂ ಪರವಾಗಿಲ್ಲ ಚಿತ್ರವು ಅಲಂಕಾರದಿಂದ ತುಂಬಿ ತುಳುಕುತ್ತಿದೆ. ಚಿತ್ರ ನೈಜ ಸಂಯೋಜನೆಯಾಗಿದ್ದು. ಪೋಸ್ಟರ್ ಮಾಧ್ಯಮದಿಂದ ಮಾಡಿದ್ದಾರೆ. ಇದರಲ್ಲಿ ಇರುವ ಬಣ್ಣಗಳ ಭಾಷೆ ಎಲ್ಲರನ್ನು ಸಂಪಾದಿಸುತ್ತದೆ.

**೨. ಸಂಪ್ರದಾಯಿಕ ಶೈಲಿಯ ವರ್ಣಚಿತ್ರಗಳು**

೧. ಬಸವಣ್ಣ

ಸಂಪ್ರದಾಯಿಕ ಶೈಲಿಯಲ್ಲಿ ಮೂಡಿಬಂದ ಬಸವೇಶ್ವರರ ಕಲಾತ್ಮಕ. ಕಲಾವಿದ ಎನ್.ಸಿ.ದೇಸಾಯಿ ರಚಿಸಿದ್ದಾರೆ. ಸದ್ಯಕ್ಕೆ ಈ ಕಲಾಕೃತಿ ಧಾರವಾಡದ ಜಿಲ್ಲಾಧಿಕಾರಿಗಳ ಕಚೇರಿಯ ಆವರಣದಲ್ಲಿರುವ ಹೋಮಿಯೋಪಥಿ ಆಸ್ಪತ್ರೆಯಲ್ಲಿದೆ.

ಎನ್.ಸಿ.ದೇಸಾಯಿಯವರಿಗೆ ಬಸವಣ್ಣನ ವಚನಗಳು ತುಂಬ ಇಷ್ಟವಾಗುತ್ತಿದ್ದವು. ಎನ್ನುವದಕ್ಕೆ ಅವರ ಅನೇಕ ಲೇಖನಗಳಲ್ಲಿ ವಚನಗಳನ್ನು ಬಳಸಿದ್ದಾರೆ.

ಎನ್.ಸಿ.ದೇಸಾಯಿಯವರು ಅವರ ಕೊನೆಯ ದಿನಗಳಲ್ಲಿ ಅನೇಕ ಸಂಪ್ರದಾಯಿಕ ಕಲಾ ಕೃತಿಗಳನ್ನು ರಚನೆ ಮಾಡಿದರು. ಅದರಲ್ಲಿ ಈ ಚಿತ್ರದ ಮಾದ್ಯಮ ಪೋಸ್ಟರ ವರ್ಣಗಳು ಹುಣಿಸೆ ಬೀಜದ ಪೌಡರ್ ಜೊತೆ ಪಿಪ್ಪಿಕಲ್ ಮಿಶ್ರ ಮಾಡಿ ಬಳಸಿದ್ದಾರೆ. ಜೊತೆಗೆ ಅದಕ್ಕೆ ಗೋಲ್ಡ್ ಬಣ್ಣವನ್ನು ಬಳಸಿದ್ದಾರೆ. ಒಟ್ಟಾರೆ ಈ ಚಿತ್ರ ಸಾಂಪ್ರದಾಯಿಕವಾಗಿ ಮೂಡಿಬಂದ ಯುಗ ಪ್ರವರ್ತಕ ಬಸವಣ್ಣನವರ ಕಲಾ ಕೃತಿ ಸಂಪ್ರದಾಯಕ ಶೈಲಿಯ ಕಲಾಕೃತಿಗಳಲ್ಲಿ ಒಂದು ಎಂಬ ಹೊಸ ದಾಖಲೆ ಮಾಡಿಕೊಂಡಿದೆ.

**ಗಣೇಶ**

ಎನ್.ಸಿ.ದೇಸಾಯಿಯವರು ಅನೇಕ ವಿಶ್ವ ವ್ಯಾಪಿಯ ಗಣೇಶನ ಕಲಾಕೃತಿಗಳನ್ನು ರಚನೆ ಮಾಡಿದ್ದಾರೆ. ಅವುಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಎನ್.ಸಿ.ದೇಸಾಯಿಯವರಿಗೆ ಸಂಪ್ರದಾಯಿಕ ಶೈಲಿಯ ಕುರಿತ ರಚನೆ ಮಾಡಬೇಕು ಎಂಬುವುದು ಆಕಸ್ಮಿಕವಾಗಿ ಹೊಳೆಯಿತು ತಕ್ಷಣವೇ ಸಂತೆಗೆ ಹೋಗಿ ಅದಕ್ಕೆ ಬೇಕಾದ ಸಾಮಗ್ರಿಗಳನ್ನು ತಂದು ಚಿತ್ರ ಬರೆಯಲು ಪ್ರಾರಂಭ ಮಾಡಿದರು. ಅವರಲ್ಲಿ ಇರುವ ವಿಶೇಷತೆ ಎಂದರೆ ಅವರ ಮನಸ್ಸಿಗೆ ಬಂದ ಕೆಲಸ ತಕ್ಷಣವೇ ಮಾಡುವುದು. ಈ ರೀತಿಯಾಗಿ ಗಣೇಶ ಸಂಪ್ರದಾಯಿಕ ಕಲಾಕೃತಿಗಳಲ್ಲಿ ಬಹಳಷ್ಟು ವ್ಯತ್ಯಾಸವಿದೆ. ಎನ್.ಸಿ.ದೇಸಾಯಿಯವರು ರಚನೆ ಮಾಡಿದ ಕಲಾಕೃತಿಗಳ ತಮ್ಮ ಸ್ವಂತಿಕೆಯನ್ನು ವ್ಯಕ್ತಪಡಿಸುತ್ತವೆ. ಅದರಲ್ಲಿ ಅವರು ಆಧುನಿಕ ರಸಾಯನಿಕ ಬಣ್ಣಗಳ ಬಳಸುತ್ತಿದ್ದರು. ಜೊತೆಗೆ ಹುಣಿಸೆ ಬೀಜ ಪೌಡರ್ ಉಪಯೋಗಿಸುತ್ತಿದ್ದರು.

**ಸರಸ್ವತಿ**

ಎನ್.ಸಿ.ದೇಸಾಯಿಯವರ ಸಾಂಪ್ರದಾಯಿಕ ಕಲಾಕೃತಿಗಳಲ್ಲಿ ಒಂದಾದ ಸರಸ್ವತಿಯ ಕಲಾಕೃತಿಯಲ್ಲಿ ಸರಸ್ವತಿ ನಾಲ್ಕು ಕೈಗಳನ್ನು ಹೊಂದಿದ್ದು ವೀಣೆಯನ್ನು ಕೈಯಲ್ಲಿ ಹಿಡಿದಿರುವಳು. ಒಂದು ಕೈಯಲ್ಲಿ ಪುಸ್ತಕವನ್ನು ಹಿಡಿದು. ಇನ್ನೊಂದು ಕೈಯಲ್ಲಿ ಜಪಮಾಲೆ ಹಿಡಿದಿದ್ದಾಳೆ. ಸರಸ್ವತಿಗೆ ಉಡಿಸಿದ ಸೀರೆ ರಮ್ಯವಾಗಿ ಕಂಡುಬರುತ್ತದೆ. ಎನ್.ಸಿ.ದೇಸಾಯಿಯವರಿಗೆ ಅವರ ಜೀವನದ ಕೊನೆಯ ಅವಧಿಯಲ್ಲಿ ಅವರದು ಒಂದು ಆಸೆಯಾಗಿತ್ತು. ಒಂದು ಸಂಪ್ರದಾಯ ಶೈಲಿಯ ಶಾಲೆಯನ್ನು ಕಟ್ಟುವುದು ಅದಕ್ಕೆ ಸಂಬಂಧ ಪಟ್ಟ ವ್ಯಕ್ತಿಗಳಿಗೆ. ಪತ್ರಗಳನ್ನು ಬರೆದು ಕಳಿಸಿದ್ದರು. ಅವರಿಂದ ಯಾವ ರೀತಿಯ ಪ್ರತಿಕ್ರಿಯೆ ಬಂತು ಗೊತ್ತಿಲ್ಲ ಆದರೆ ಅವರ ವಿಚಾರಗಳು ಮಾತ್ರ ತುಂಬ ಎತ್ತರ ಮಟ್ಟದಲ್ಲಿ ಇದ್ದವು ಮತ್ತು ಆರೋಗ್ಯ ಕರವಾದ ಕಲಾ ವಾತಾವರಣ ನಿರ್ಮಾಣ ಮಾಡಬೇಕು ಎಂಬುದು ಅವರ ವಿಚಾರವಾಗಿತ್ತು.

**ಶುಭರಾಯರ ಪ್ರೇರಣೆಯಿಂದ ರಚನೆಗೊಂಡ ಕಲಾಕೃತಿ**

ಇನ್ನೂರು ವರ್ಷಗಳ ಹಿಂದೆ ಟಿಪ್ಪುವಿನ ಕಾಲದಲ್ಲಿ ಆಗಿ ಹೋದ ಸೊಲ್ಲಾಪುರದಲ್ಲಿ ನೆಲೆಸಿದ್ದ ಸಂಗೀತ ಕಲಾವಿದ ಕವಿ ಶುಭರಾಯರ ಬಗ್ಗೆ ವಿವರವಾಗಿ ಸಂಶೋಧನೆ ಮಾಡಿ ಒಂದು ಪುಸ್ತಕವು ಪ್ರಕಟವಾಯಿತು. ಆ ಸಂದರ್ಭದಲ್ಲಿ ಈ ಕೃತಿ ರಚನೆ ಮಾಡಿದರು.

## ೩. ರೂಪಭಾವ ಚಿತ್ರಗಳು

### ಗಳಗನಾಥ

ಎಸ್.ಸಿ.ದೇಸಾಯಿಯವರು ಕನ್ನಡ ವಿಶ್ವವಿದ್ಯಾಲಯಕ್ಕೆ ಚಿತ್ರಿಸಿಕೊಟ್ಟ ಕೃತಿ ಇದು. ಈ ಚಿತ್ರವು ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟವಾದ ಪುಸ್ತಕಗಳಲ್ಲಿ ಮೂಡಿಬಂದಿದೆ. ಎಸ್.ಸಿ.ದೇಸಾಯಿಯವರು ಗಳಗನಾಥರನ್ನು ಕುರಿತು ಅವರ ದಿನಚರಿಗಳಲ್ಲಿ ಅನೇಕ ಕಡೆ ಬರೆದಿರುವುದು ಕಂಡುಬರುತ್ತದೆ. ಎಸ್.ಸಿ.ದೇಸಾಯಿಯವರಿಗೆ ಶೇಷಾಚಲ ಗ್ರಂಥಾಲಯದಲ್ಲಿ ದೊರೆಯುತ್ತಿದ್ದ ಗಳಗನಾಥರ ಐತಿಹಾಸಿ ಕಾದಂಬರಿಗಳನ್ನು ಓದಿ ಅವರಲ್ಲಿ ರಾಷ್ಟ್ರಪ್ರೇಮ ಚಿಗುರಲು ಕಾರಣವಾಯಿತು ಎಂದು ಟಿಪ್ಪಣಿ ಮಾಡಿದ್ದಾರೆ. ಈ ಚಿತ್ರವು ನಿರೂಪಣ ಭಾವಚಿತ್ರವನ್ನು ಜಲವರ್ಣದಿಂದ ರಚನೆ ಮಾಡಿದ್ದಾರೆ. ಗಳಗನಾಥರು ಸಂಪೂರ್ಣವಾಗಿ ಬಿಳಿ ಪೇಟ ಕಟ್ಟಿಸಿಕೊಂಡು ಸದಾ ಒಂದು ಬಿಳಿ ವಸ್ತ್ರ ಭುಜದ ಮೇಲೆ ಇರುತ್ತಿತ್ತು. ಎಂದು ಈ ಚಿತ್ರ ನಿರೂಪಿಸುತ್ತದೆ. ಹಣೆಯ ಮೇಲೆ ಒಂದು ವಿಭೂತಿ ಅಡ್ಡ ರೇಖೆಗಳು ಇದ್ದು ಅದರ ಮಧ್ಯೆ ಕುಂಕುಮ ಬಿಂದು ಹಚ್ಚಿಕೊಂಡು ಇರುತ್ತಿದ್ದರು. ಈ ಭಾವಚಿತ್ರ ಇಷ್ಟು ಭಾವಪೂರ್ಣವಾಗಿ ಮೂಡಿಬರಲು. ಎಸ್.ಸಿ.ದೇಸಾಯಿಯವರಿಗೆ ಗಳಗನಾಥರ ಮೇಲೆ ಇದ್ದ ಭಕ್ತಿ ಮತ್ತು ದೇಶಪ್ರೇಮವು ಆಧಾರವಾಗಿ ನಿಲ್ಲುತ್ತದೆ.

### ಡಿ.ವಿ.ಜಿ.

ಎಸ್.ಸಿ.ದೇಸಾಯಿಯವರ ಕಲಾಕೃತಿಗಳಲ್ಲಿ ಮೂಡಿದ ಅನೇಕ ಸಾಹಿತಿಗಳಲ್ಲಿ ಮತ್ತೊಬ್ಬರಾದ ಡಿ.ವಿ.ಜಿ. ಇವರ ರೂಪ ಭಾವಚಿತ್ರ ಜಲವರ್ಣದಿಂದ ಮಾಡಿದ್ದಾರೆ. ಈ ಚಿತ್ರದಲ್ಲಿ ಡಿ.ವಿ.ಜಿ. ಯವರು ತಮ್ಮ ಶಾಲನ್ನು ಮೈಮೇಲೆ ಹೊದ್ದುಕೊಂಡು ಕುಳಿತಿರುವ ಚಿತ್ರವಾಗಿದೆ.

### ದ.ರಾ.ಬೇಂದ್ರೆ

ದ.ರಾ.ಬೇಂದ್ರೆ ಯವರನ್ನು ಕುರಿತು ನಾ ಏನು ಹೇಳಿದರೂ ಕಡಿಮೆಯೇ. ಅವರ ಪದ್ಯ ಎದ್ದು ಹಾಡಿತವು ಯಾರಿಗೂ ಹೇಳೋಣು ಬ್ಯಾಡ, ನೀ ಹೀಂಗ ನೋಡ ಬ್ಯಾಡಾ ನನ್ನ, ನಾ ಹೆಂಗಾ ನೋಡಲಿ ನಿನ್ನ, ಇನ್ನು ಯಾಕ ಬಂದಿಲ್ಲಾವ ಹುಬ್ಬಳ್ಳಿ ಯಾವ ವಾರದೊಳಗೆ ನಾಲ್ಕು ಸಾರೆ ಬಂದು ಹೋಗುವ, ಪಾತರಗಿತ್ತಿ ಪಕ್ಕ ನೀ ಹೀಂಗಾ ನೋಡ ಬ್ಯಾಡ ಅಕ್ಕ, ಬೇಂದ್ರೆಯವರ ಗೀತೆಗಳನ್ನು ಕೇಳದವರಾರು ಯಾರಿಗ ಗೊತ್ತಿಲ್ಲ ಚಿಕ್ಕ ಮಕ್ಕಳು ತರುಣ ತರುಣಿಯರು ಹಾಡಿ ಆನಂದ ಪಡುವರು.

ಹುಬ್ಬಳ್ಳಿಯಲ್ಲಿ ಎಸ್.ಸಿ.ದೇಸಾಯಿಯವರ ಮನೆಯ ಹತ್ತಿರವೇ ಇರುವ ಪ್ರೊ.ಕೆ.ಎಸ್.ಶರ್ಮಾರವರ ತಾಂತ್ರಿಕ ವಿದ್ಯಾಲಯ ನಿಸರ್ಗ ಚಿಕಿತ್ಸೆ ಜೊತೆಗೆ ಬೇಂದ್ರೆ ಕುಟೀರದಲ್ಲಿ ಎಸ್.ಸಿ.ದೇಸಾಯಿಯವರ ಬೇಂದ್ರೆಯವರನ್ನು ಕುರಿತು ಮಾಡಿದ ಅನೇಕ ಕಲಾಕೃತಿಗಳು ಆ ಕುಟೀರದಲ್ಲಿ ತಲೆ ಎತ್ತಿ ನಿಂತಿವೆ. ಅಂತಹ ಕಲಾಕೃತಿಯಲ್ಲಿ ಒಂದು ಕಲಾಕೃತಿ ದ.ರಾ.ಬೇಂದ್ರೆಯವರ ರೂಪ ಭಾವ ಚಿತ್ರ. ಈ ಚಿತ್ರ ಜಲವರ್ಣದಿಂದ ರಚನೆಯಾಗಿದೆ. ನೆತ್ತಿಯ ಮೇಲೊಂದು ಟೋಪಿಗೆ ಹಣೆಯ ಮೇಲೊಂದು ಕುಂಕಮದ ಬೊಟ್ಟು. ದ.ರಾ.ಬೇಂದ್ರೆಯವರ ಕವಿತೆಗಳ ಮೇಲೆ ಅನೇಕ ಕಲಾಕೃತಿಗಳನ್ನು ರಚನೆ ಮಾಡಿದ್ದಾರೆ. ಬೇಂದ್ರೆ ಕವಿತೆಗಳು ಎಸ್.ಸಿ.ದೇಸಾಯಿಯವರ ಬಣ್ಣಗಳು ಒಂದಾಗಿ ಪತ್ರಿಕೆಗಳಲ್ಲಿ ಮಾತನಾಡುತ್ತಿದ್ದವು ಮತ್ತು ಮಾತಾಡುತ್ತಿವೆ.

### ಸ್ವಾಮಿ ವಿವೇಕಾನಂದ

ಸ್ವಾಮಿ ವಿವೇಕಾನಂದ ದಿವ್ಯ ಲೀಲಾ ಕ್ಷೇತ್ರವಾದ ಡಿವೈನ ಪಾರ್ಕ್‌ಗೆ ಮೊದಲು ಎಸ್.ಎಂ.ಪಂಡಿತರು ವಿವೇಕಾನಂದ ಕಲಾಕೃತಿಗಳು ರಚನೆ ಮಾಡಿಕೊಡುತ್ತಿದ್ದರು ಅವರ ತರುವಾಯ ಆ ಕೆಲಸವು ಎಸ್.ಸಿ.ದೇಸಾಯಿಯವರಿಗೆ ವಹಿಸಿಕೊಟ್ಟರು. ಎಸ್.ಎಂ.ಪಂಡಿತರಗಿಂತ ಹೆಚ್ಚು ಎಂದರೆ ಶಂಕ್ಕೂ ಹೆಚ್ಚು ಕಲಾಕೃತಿಗಳನ್ನು ಮಾಡಿಕೊಟ್ಟಿದ್ದಾರೆ. ಎಸ್.ಸಿ.ದೇಸಾಯಿಯವರು ವಿವೇಕಾನಂದ ಮೂಲ ಛಾಯಾಚಿತ್ರಗಳನ್ನು ಇಟ್ಟುಕೊಂಡ ಕೃತಿ ರಚನೆ ಮಾಡಿ ಡಿವೈನ ಪಾರ್ಕ್‌ಗೆ ನೀಡಿದ್ದಾರೆ. ಅದರಲ್ಲಿ ಅವರು ರಚನೆ ಮಾಡಿದ ಕಲಾಕೃತಿಗಳಲ್ಲಿ ವಿವೇಕಾನಂದ ಬದುಕಿನ ಹಲವು ಕಾಲಘಟ್ಟಗಳು ಮತ್ತು ಭಾವನೆಗಳು ಕಂಡುಬರುತ್ತವೆ. ಅದರಲ್ಲಿ ರೂಪ ಭಾವ ಚಿತ್ರಗಳಲ್ಲಿ ಅವರ ವಸ್ತು ವಿನ್ಯಾಸ ತಲೆಗೆ ಸುತ್ತಿದ ಪೇಟ ಜೊತೆಗೆ ಅವರು ಧರಿಸಿದ ಬಟ್ಟೆಗಳ ಬಣ್ಣಗಳು ಎಲ್ಲವೂ ಕಂಡುಬರುತ್ತದೆ.

## ೪. ವ್ಯಕ್ತಿ ಮತ್ತು ಐತಿಹಾಸಿಕ, ಧಾರ್ಮಿಕ ಮಹಾ ಪುರುಷರ ವರ್ಣಚಿತ್ರಗಳು

### ಭಗವಾನ್ ನಾರಾಯಣ ಸ್ವಾಮಿ

ಅಗಡಿಯ ಆನಂದವನದ ಭಗವಾನ ನಾರಾಯಣ ಸ್ವಾಮಿ ಎಸ್.ಸಿ.ದೇಸಾಯಿಯವರಿಗೆ ಈ ಸ್ವಾಮಿಯ ಹೆಸರನ್ನೇ ಇಟ್ಟಿದ್ದಾರೆ. ನಂತರದ ದಿನಗಳಲ್ಲಿ ನಾರಾಯಣ ದಿಂದ ನಾನಾ ಸಾಹೇಬ ದೇಸಾಯಿಯವರಾದರು. ಎಸ್.ಸಿ.ದೇಸಾಯಿಯವರು ರಚನೆ ಮಾಡಿದ ಈ ಧಾರ್ಮಿಕ ಪುರುಷನ ಚಿತ್ರವನ್ನು ನೋಡಿದರೆ ತಿಳಿಯುತ್ತದೆ. ಅವರ ಕೈ ಚಳಕದಲ್ಲಿ ಎಂಥಹ ಶಕ್ತಿ ಇದೆ ಎಂದು. ಅದಕ್ಕೆ ಎಸ್.ಸಿ.ದೇಸಾಯಿಯವರು ಭಗವಾನ್ ನಾರಾಯಣ ಸ್ವಾಮಿಯವರ ಮತ್ತು ಶೇಷಾಚಲ ಸ್ವಾಮಿಯವರ ಕೃಪೆ ಎಂದು ಹೇಳುತ್ತಿದ್ದರು. ಈ ಚಿತ್ರವನ್ನು ಪೋಸ್ಟರ್ ಮಾಧ್ಯಮದಿಂದ ಮಾಡಿದ್ದಾರೆ.

### ಶಂಕರಾಚಾರ್ಯರು

ಎಸ್.ಸಿ.ದೇಸಾಯಿಯವರು ಆಧ್ಯಾತ್ಮಿಕ ವಿಚಾರಗಳನ್ನು ಇಟ್ಟುಕೊಂಡು ಹೆಚ್ಚು ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಈ ಚಿತ್ರದಲ್ಲಿ ಶಂಕರಾಚಾರ್ಯರು ಪ್ರಕೃತಿಯ ಮಡಿಲಲ್ಲಿ ಕುಳಿತು

ಇರುವುದು ಕಂಡುಬರುತ್ತದೆ. ಚಿರತೆಯ ಚರ್ಮದ ಮೇಲೆ ಕುಳಿತು, ಕೈಯಲ್ಲಿ ಪುಸ್ತಕವನ್ನು ಹಿಡಿದು ಕುಳಿತಿರುವರು ಹಿಂಭಾಗದಲ್ಲಿ ಗಿಡ ಮರಗಳು ನೀರು ಹರಿಯುತ್ತಿರುವುದು ಕಂಡುಬರುತ್ತದೆ. ಈ ಚಿತ್ರವನ್ನು ತೈಲ ವರ್ಣದಿಂದ ಮಾಡಿದ್ದಾರೆ.

**ಸ್ವಾಮಿ ವಿವೇಕಾನಂದ**

ಎನ್.ಸಿ.ದೇಸಾಯಿಯವರು ರಚನೆ ಮಾಡಿದ ವಿವೇಕಾನಂದರ ಕಲಾಕೃತಿಗಳನ್ನು ಡಿವ್ಹನ್ ಪಾರ್ಕ್‌ಗೆ ಕೊಟ್ಟರು. ಒನೆಯ ಚಿತ್ರದಲ್ಲಿ ವಿವೇಕಾನಂದರು ಸನ್ಯಾಸಿಯ ರೂಪದಲ್ಲಿ ಕುಳಿತುಕೊಂಡಿದ್ದಾರೆ. ವಿವೇಕಾನಂದರ ತಲೆ ಹಿಂದೆ ಪ್ರಭಾವಳಿ ಕಂಡುಬರುತ್ತದೆ. ದೂರದಲ್ಲಿ ಗುಡ್ಡಗಳು ಶಾಂತವಾಗಿ ನಿಂತಿವೆ ಕಲ್ಲು ಬಂಡೆಯ ಮೇಲೆ ಕುಳಿತ ವಿವೇಕಾನಂದರು ದ್ಯಾನದಲ್ಲಿ ಮಗ್ನರಾಗಿದ್ದಾರೆ. ಈ ಚಿತ್ರವು ಪೋಸ್ಟರ್ ಮಾಧ್ಯಮದಲ್ಲಿ ರೂಪ ಪಡೆದುಕೊಂಡಿದೆ.

ಳನೆಯ ಚಿತ್ರದಲ್ಲಿ ಹಿಮಾಲಯ ಪರ್ವತಗಳ ಮುಂದೆ ನಿಂತು ಗಂಭೀರವಾದ ಯೋಚನೆಯಲ್ಲಿ ಇರುವುದು ಕಂಡುಬರುತ್ತದೆ. ಈ ಚಿತ್ರದಲ್ಲಿ ಹಿಮಾಲಯ ಪರ್ವತದ ಹಿಂದೆ ನೀಲಿ ಆಕಾಶವಿದ್ದು ಮೋಡಗಳು ನಡೆದಾಡುತ್ತಿವೆ. ಈ ಚಿತ್ರವು ಸಹ ಪೋಸ್ಟರ್ ಮಾಧ್ಯಮದಿಂದ ರಚನೆಯಾಗಿದ್ದು, ಈ ಚಿತ್ರದಲ್ಲಿ ಸ್ಪ್ರೆ ಮಾಡುವ ಯಂತ್ರ ಬಳಕೆ ಮಾಡಿ ಕೃತಿ ರಚನೆ ಮಾಡಿದ್ದಾರೆ. ಗುಡ್ಡಗಳ ಮಧ್ಯದಿಂದ ನೀರು ಹರಿದು ಬರುತ್ತಿದೆ.

**ಬಿಜಾಪುರದ ಆದಿಲ್‌ಶಾಹಿ**

ಆದಿಲ್‌ಶಾಹಿ ೧, ಆದಿಲ್‌ಶಾಹಿ ೨, ಆದಿಲ್‌ಶಾಹಿ ೩ ಇದ್ದಾರೆ, ಈ ಮೂರು ಚಿತ್ರಗಳಲ್ಲಿ ಆದಿಲ್‌ಶಾಹಿ ಇದ್ದರು. ಈ ಮೂರು ಚಿತ್ರಗಳಲ್ಲಿ ವಿಭಿನ್ನ ವಯಸ್ಸು ಕಂಡುಬರುತ್ತದೆ. ಒಂದು ಚಿತ್ರದಲ್ಲಿ ಬಿಲ್ಲು ಬಾಣಗಳು ಇದ್ದರೆ. ಇನ್ನೊಂದು ಚಿತ್ರದಲ್ಲಿ ಬೀಗದ ಕೈ ಇದೆ. ಮತ್ತೊಂದು ಚಿತ್ರದಲ್ಲಿ ಹೂ ಕೈಯಲ್ಲಿ ಇರುವುದು ಕಂಡುಬರುತ್ತದೆ. ಈ ಮೂರು ಒಬ್ಬ ರಾಜನ ಯುದ್ಧ, ಐಶ್ವರ್ಯ, ಐಶಾರಾಮಿಯನ್ನು ತೋರಿಸುತ್ತವೆ. ಈ ಮೂರು ಚಿತ್ರಗಳಲ್ಲಿ ವಸ್ತ್ರ ವಿನ್ಯಾಸ ಮತ್ತು ಬಣ್ಣಗಳು ಬೇರೆ ಬೇರೆ ಕಂಡುಬರುತ್ತವೆ. ಈ ಮೂರು ಚಿತ್ರಗಳು ಪೋಸ್ಟರ್ ಮಾಧ್ಯಮದಲ್ಲಿ ರಚನೆಯಾಗಿವೆ.

**ವ್ಯಕ್ತಿ ಚಿತ್ರದಲ್ಲಿ**

ಎನ್.ಸಿ.ದೇಸಾಯಿಯವರು ವ್ಯಾಸಂಗ ಮಾಡುವ ಸಮಯದಲ್ಲಿ ರಚನೆ ಮಾಡಿದ ವ್ಯಕ್ತಿ ಚಿತ್ರದಲ್ಲಿ ಒಬ್ಬ ಮಹಿಳೆಯನ್ನು ಕೂಡಿಸಿ ರಚಿಸಿದ ಕಲಾಕೃತಿಯಾಗಿದೆ. ಅಧ್ಯಾಯ ಮಾಡುವಾಗ ರಚನೆಯಾದ ಚಿತ್ರಗಳಲ್ಲಿ ಇದು ಒಂದೇ ಉಳಿದುಕೊಂಡಿದೆ.

## ೫. ವಿಶ್ವವ್ಯಾಪಿ ಗಣೇಶನ ಚಿತ್ರಗಳು

ನಮ್ಮ ದಿನನಿತ್ಯ ಜೀವನದಲ್ಲಿ ಉಳಿದೆಲ್ಲ ದೇವತೆಗಳಿಗಿಂತಲೂ ಹೆಚ್ಚು ಗಾಢವಾಗಿ, ಆಳವಾಗಿ ಬೇರೂರಿರುವ ವಿಘ್ನೇಶ್ವರ ಶೂರ ಕುತೂಹಲ ಮೂಡಿಸುವ ಮುದ್ದು ದೇವರು ಕಣ್ಣಿಗೆ ಬಿದ್ದೊಡನೆ ಉಲ್ಲಾಸ, ಸಂತಸ, ನಗೆ ಮತ್ತು ಆಸಕ್ತಿ ಮೂಡಿಸುವಂತೆಯೇ ಭಕ್ತರ ಮನದಲ್ಲಿ ಭಕ್ತಿ, ಶ್ರದ್ಧೆ ಮತ್ತು ಗೌರವಗಳನ್ನು ಮೂಡಿಸಬಲ್ಲ ಮಹಾನ್ ಅಸ್ತಿತ್ವ ಈ ದೇವತೆಯದು. ಏಕೆಂದರೆ ಈತನ ನೆನೆಯದಿದ್ದರೆ, ನಮಿಸದಿದ್ದರೆ ಎಲ್ಲಕ್ಕೂ ವಿಘ್ನ ಈತ ಕ್ಷುದ್ರ ಶಕ್ತಿಗಳನ್ನು ಸದೆಬಡೆಯಬಲ್ಲ ಸರ್ವಶಕ್ತ ಮತ್ತು ತಿಂಗಳಣ್ಣ ಚಂದ್ರಮನಿಗೂ ಶಾಪವಿಕ್ಕಿದ ಶಕ್ತಿಶಾಲಿ.

ಗಣಪ್ಪ, ಗಣಪ, ಗಣೇಶ, ಗಣನಾಯಕ ವಿಘ್ನೇಶ್ವರ, ವಿಘ್ನರಾಜ, ವಿನಾಯಕ, ಏಕದಂತ, ವಕ್ರತುಂಡ, ಲಂಬೋದರ ಇತ್ಯಾದಿಯಾಗಿ ನೂರೆಂಟು ಹೆಸರುಗಳುಳ್ಳ ಈ ದೇವತೆ ಕೇವಲ ಭಾರತೀಯರ ಹಿಂದೂಗಳ ಕುತೂಹಲ ಹಿಡಿದಿಟ್ಟಿದ್ದರೆ ಅದಕ್ಕೆ ಆಶ್ಚರ್ಯ ಪಡಬೇಕಿರಲಿಲ್ಲ. ಈ ಗಣೇಶ ತನ್ನ ಸುತ್ತಲಿನ ಗೆರೆಯನ್ನು ವಿಸ್ತಾರಗೊಳಿಸಿಕೊಂಡು, ಯಾವ ಬಂಧನವೂ ಇಲ್ಲದೆ ನಡೆದುಹೋಗಿದ್ದಾನೆ. ವಿವಿಧ ದೇಶ, ಜಾತಿ, ಜನಾಂಗಗಳ ಜನರ ಭಕ್ತಿ, ಗೌರವಗಳನ್ನು ಬಾಚಿಕೊಂಡು ತಾನೇ ತಾನಾಗಿ ವಿಜೃಂಭಿಸಿದ್ದಾನೆ. ನಿಜ, ಎಷ್ಟೋ ಜನಕ್ಕೆ ವಿನಾಯಕ ಸಂಸ್ಕೃತಿ, ಭಕ್ತಿ ವಿಧಾನಗಳು ಭಾರತದಾಚೆಗೂ ಹರಡಿರುವ ವಿಷಯ ತಿಳಿಯದಿರಬಹುದು. ಹಲವು ಹತ್ತು ದೇಶಗಳಿಗೆ ಹರಡಿರುವ ಗಣಪತಿಯ ಕೀರ್ತಿ ತಿಳಿದರೆ ಆಶ್ಚರ್ಯವು ಆದೀತು.

ಗಣಪತಿ ವಿದೇಶಕ್ಕೆ ಹೋದದ್ದು ಯಾವಾಗ ಹೇಗೆ ಮತ್ತು ಯಾಕೆ ಇವು ಕುತೂಹಲಕರ ಪ್ರಶ್ನೆಗಳು ಕ್ರಿಸ್ತಶಕದ ಪ್ರಾರಂಭದಲ್ಲಿ ಬ್ರಾಹ್ಮಣರು ಧಾರ್ಮಿಕ ಕಾರಗಳಿಗಾಗಿ ವಿದೇಶಕ್ಕೆ ವಲಸೆ ಹೋಗತೊಡಗಿದ್ದು ನಿಜ. ಅದರ ಜೊತೆಯಲ್ಲೇ ಈ ಆರಾಧ್ಯ ದೇವತೆಯೂ ಕಡಲು ದಾಟಿತೆ? ಇದೊಂದು ಊಹೆಯಾದರೆ, ಇದೊಂದು ಅಭಿಪ್ರಾಯದ ಪಕಾರ ಗಣಪತಿಯನ್ನು ವಿದೇಶಗಳಿಗೆ ಒಯ್ದವರು ವ್ಯಾಪಾರಸ್ಥರು. ಸಾಮಾನುಗಳೊಂದಿಗೆ ಹೊರಟ ವ್ಯಾಪಾರಿಗಳು ಜೊತೆಗೆ ವಿಘ್ನೇಶ್ವರನಿದ್ದರೆ ತಮಗೆ ಅಡಿ ಆತಂಕಗಳು ಬಂದೊದಗುವುದಿಲ್ಲವೆಂಬ ನಂಬಿಕೆಯುಳ್ಳವರಾಗಿರಬೇಕು. ತೊಡಕಿನಿಂದ ಪಾರು ಮಾಡುವ, ವಿಘ್ನನಾಶಕ ಕ್ಷೇತ್ರಪಾಲಕ ಹಾಗೂ ರಕ್ಷಕ ಎಂಬ ಕಾರಣಕ್ಕಾಗಿಯೇ ಗಣೇಶನನ್ನು ಈ ವ್ಯಾಪಾರಿಗಳು ಕರೆದೊಯ್ದಿರಬೇಕು. ಹೀಗೆ ಭಾರತಿಯರ ಜೊತೆಯಲ್ಲೇ ವಿದೇಶಗಳಿಗೆ ಹೋದ ವಿನಾಯಕ ಹೋದೆಡೆಗೆಲ್ಲಾ ಅಲ್ಲಿಯ ಜನರ ಭಕ್ತಿ ಗಳಿಸಿದ್ದು, ಕುತೂಹಲ ಕೆರಳಿಸಿದ್ದು ಮತ್ತು ಆರಾಧ್ಯಮೂರ್ತಿಯಾಗಿ ನೆಲೆಗೊಳಿಸಿದ್ದು ನಿಜಕ್ಕೂ ಆಶ್ಚರ್ಯಕರವೆ.

ಎನ್.ಸಿ. ದೇಸಾಯಿಯವರ ಗಮನ ವಿಶ್ವವ್ಯಾಪಿ ಗಣೇಶನ ಶಿಲ್ಪಗಳ ಬಗ್ಗೆ ಸೆಳೆದದ್ದು ಶ್ರೀ ಗೋವರ್ಧನ್ ಅಂಕೋಲೇಕರ್ ಅವರ ಹೊರನಾಡಿನ ಗಣಪತಿಗಳ ಪ್ರತಿಗಳ ಸಂಗ್ರಹ. ಇವುಗಳಿಂದ ಪ್ರಭಾವಿತರಾದ ಎನ್.ಸಿ. ದೇಸಾಯಿಯವರು ಇದನ್ನು ತಮ್ಮ ಕುಂಚದಿಂದ ಪುನರಚಿಸಿದ್ದಾರೆ.

ಎನ್.ಸಿ. ದೇಸಾಯಿಯವರ ರಚನೆ ಮಾಡಿದ ೩೫೦ಕ್ಕೂ ಹೆಚ್ಚು ವಿಶ್ವವ್ಯಾಪಿ ಗಣೇಶನ ಕಲಾಕೃತಿಗಳು ಈಗಲೂ ಕೂಡ ಅವರ ಮನೆಯಲ್ಲಿ ನೋಡಲು ಸಿಗುತ್ತವೆ. ಅದರಲ್ಲಿ ಬಾರಾ ಗಣೇಶ, ರಕ್ಷಕ ದೇವತೆಯಾದ ಗಣೇಶ, ವಿಯಾಟ್ನಂ, ಜಾವಾದ ಗಣೇಶ, ಜಾವಾಗ ಗಣೇಶ, ಜಾವಾದ ಪ್ರಾಚೀನ ಗಣೇಶ, ಕಾಂಬೋಡಿಯಾ ಗಣೇಶ, ನೇಪಾಳ ಶಕ್ತಿ ಸಹಿತ ಹೀರಂಬ ಗಣೇಶ, ಕಾಂಗಿ ತೆನ್ ಜಪಾನಿನ ಗಣೇಶ, ಅಫಘಾನಿಸ್ತಾನ ನಾಗಬಂಧ ಗಣೇಶ, ಚೀನಾ, ಜಾವಾ, ಸಿಲೋನ್, ಗಣೇಶ ಶಿವ ದೇವಾಲಯ, ಪೊಲೊನ್ನಾರುವ, ಸರ್ವತೋಭದ್ರ ಗಣೇಶ ಕಂಡಾಲ್, ಇಂಡೋಚೈನಾ ಇನ್ನೂ ಅನೇಕ ಕಡಲಾಚೆಯ ಗಣಪತಿಗಳು ಅವರ ಕುಂಚದಲ್ಲಿ ಮೂಡಿಬಂದಿವೆ. ಈ ಎಲ್ಲ ಕಲಾಕೃತಿಗಳ ಜಲವರ್ಣಗಳಲ್ಲಿ ರಚನೆ ಮಾಡಿದ್ದಾರೆ.

## ೬. ದೇವತಾ ಚಿತ್ರಗಳು

**ಕಾಳಿಕಾದೇವಿ ೧**

ಈ ದೇವತಾ ಚಿತ್ರಗಳನ್ನು ರಚನೆ ಮಾಡುವಾಗ ಈ ವಿಷಯ ಕುರಿತು ಸಂಪ್ರಭಂದ ಸಿದ್ಧಪಡಿಸುತ್ತಿರುವ ನಾನು ಅವರಿಗೆ ಸಹಾಯಕ ಕಲಾವಿದೆಯಾಗಿ ಕೆಲಸ ಮಾಡುತ್ತಿದ್ದೆ. ಸಾಲಿಗ್ರಾಮದವರು ಎನ್.ಸಿ.ದೇಸಾಯಿಯವರಿಗೆ ಕಾಳಿಕಾದೇವಿಯ ಕಲಾಕೃತಿ ರಚನೆ ಮಾಡಿಕೊಡಲು ಹೇಳಿದಾಗ ಈ ಚಿತ್ರವನ್ನು ಪ್ರಾರಂಭ ಮಾಡುವ ಪೂರ್ವದಲ್ಲಿ ಎನ್.ಸಿ.ದೇಸಾಯಿಯವರ ಕಾಳಿಕದೇವಿಯನ್ನು ಮನದಲ್ಲಿ ನೆನೆದು. ಈ ಚಿತ್ರ ಪ್ರಾರಂಭ ಮಾಡಿದರು. ನಾನು ಈ ಸನ್ನಿವೇಶವನ್ನು ನೋಡುತ್ತಲೇ ಇದ್ದೆ. ಅವರ ಕೈಯಲ್ಲಿ ಸಾಲಿಗ್ರಾಮದ ಕುಲದೇವತೆಯಾದ ಕಾಳಿಕಾದೇವಿಯ ಹಳೆಯ ಶಿಲ್ಪವಾಗಿತ್ತು. ಅದನ್ನು ಅವರು ಮುಂದೆ ಇಟ್ಟುಕೊಂಡು ಪೆನ್ಸಿಲಿನಿಂದ ಸರ ಸರನೆ ರೇಖಾಚಿತ್ರ ಮಾಡಿದರು ಕಲ್ಲಿನ ರೂಪ ನೀಡಿ ದೇವಿಯ ಚಿತ್ರ ಮಾಡಿದರು ಅದರಲ್ಲಿ ನನಗೆ ಒಂದು ವಿಷಯ ತಿಳಿಯಲಿಲ್ಲಾ. ಅದು ಎಂದರೆ ಆ ಶಿಲ್ಪಕ್ಕೆ ಚಿನ್ನದ ಆಭರಣಗಳನ್ನು ಹಾಕಿದ ರೀತಿಯ ಚಿತ್ರ ಬರೆದರು. ನಾನು ತಕ್ಷಣವೇ ಸರ್ ಎಂದೆ ಅದಕ್ಕೆ ಅವರು. ಉತ್ತರಿಸಿದರು ಈ ಚಿತ್ರದ ವಿಶೇಷತೆಯೇ ಅದು ಎಂದು ಹೇಳಿದರು ಇಂಥ ವಿಶೇಷಗಳು ಅವರ ಅನೇಕ ಕಲಾಕೃತಿಗಳಲ್ಲಿ ನೋಡಲು ಸಿಗುತ್ತದೆ. ಅದೆ ಎನ್.ಸಿ.ದೇಸಾಯಿಯವರ ವೈಶಿಷ್ಟ್ಯತೆ ಎಂದರೆ ತಪ್ಪಾಗಲಾರದು. ಈ ಕಲಾಕೃತಿಯು ಪೂರ್ಣಗೊಂಡ ಮೇಲೆ ಸಾಲಿಗ್ರಾಮದವರು ಬಂದರು. ಎನ್.ಸಿ.ದೇಸಾಯಿಯವರು ಈ ಕಲಾಕೃತಿಯನ್ನು ಅವರಿಗೆ ಒಪ್ಪಿಸುವ ಪೂರ್ವದಲ್ಲಿ ಅವರ ಹೆಂಡತಿಗೆ ಹೇಳಿದರು, ಒಂದ ತೆಂಗಿನ ಕಾಯಿ, ಹೂವು ಕರ್ಪೂರ ತೆಗೆದುಕೊಂಡು ಬಾ ಎಂದರು. ಅವರ ಹೆಂಡತಿ ತೆಗೆದುಕೊಂಡು ಬಂದ ಆ ಚಿತ್ರಕ್ಕೆ ಪೂಜೆ ಮಾಡಿದರು. ನನಗೂ ಕೂಡ ಮಂಗಳ ಆರತಿಯ ತಟ್ಟ ಮುಂದಿಟ್ಟರು ತಕ್ಷಣ ನಾನು ಮಂಗಳ ಆರತಿ ತೆಗೆದುಕೊಂಡು ನಮಸ್ಕರಿಸಿದೆ. ಒಂದು ನಿಮಿಷಕ್ಕೆ ನನ್ನಲ್ಲಿ ಸುಪ್ತಮನಸ್ಸು ಎಚ್ಚರಗೊಂಡು ಮೌನದಲ್ಲಿ ನನ್ನೊಡನೆ ನುಡಿಯಿತು. ಈ ಚಿತ್ರ ರೂಪ ಪಡೆಯುವ ಪೂರ್ವದಲ್ಲಿ ಇದು ಬರೆ ಕಾಗದದ ಬೋರ್ಡ್ ಮಾತ್ರವಾಗಿತ್ತು. ಅದೇ ಕಾಗದದ ಬೋರ್ಡ್‌ಗೆ ಈ ದಿನ ನಮಸ್ಕಾರ ಮಾಡುತ್ತ ಇರುವುದು.

ನಮ್ಮ ಅಂತರಂಗದಲ್ಲಿ ಇರುವ ದೇವಿಯ ರೂಪ ಎದುರಾಗಿದೆ ಅದಕ್ಕೆ ನಾವು ನಮಸ್ಕಾರ ಮಾಡುತ್ತಿರುವುದು ಎಂದು ಹೇಳಿ ಯಾವುದೇ ಒಂದು ಚಿತ್ರ ನೋಡಿದಾಗ. ನೆನಪುಗಳು ಬಂದು ಆ ವಿಷಯಕ್ಕೆ ತಕ್ಕ ಭಾವನೆಗಳು ಉಂಟಾಗಿ ವಿಷಯಕ್ಕೆ ತಕ್ಕ ರೀತಿಯಲಿ ಪ್ರತಿಕ್ರಿಯಿಸುತ್ತೇವೆ. ಎನಿಸಿತು ಈ ರೀತಿಯಾಗಿ ಅನನ್ಯ ಭಾವನೆಗಳು ಬರುವಾಗ ಎನ್.ಸಿ.ದೇಸಾಯಿಯವರು ರಚನೆ ಮಾಡಿದ ಕಾಳಿಕಾದೇವಿ ೧ ಯ ಚಿತ್ರ ಅನೇಕ ತಳಮಳಗಳನ್ನು ನನ್ನಲ್ಲಿ ಸೃಷ್ಟಿಸುತ್ತಿತ್ತು. ಈ ಚಿತ್ರವನ್ನು ಮಾಧ್ಯಮ ಪೋಸ್ಟರ್ ಕಲರ್‌ನಿಂದ ಮಾಡಿದ್ದಾರೆ.

**ಕಾಳಿಕಾದೇವಿ ೨**

ಈ ಚಿತ್ರದಲ್ಲಿ ಎನ್.ಸಿ.ದೇಸಾಯಿಯವರ ಕಾಳಿಕಾದೇವಿಯ ಶಿಲ್ಪಕ್ಕೆ ಸೀರೆ ಉಡಿಸಿರುವದು ಕಂಡು ಬರುತ್ತದೆ. ಇಲ್ಲಿಯವರೆಗೆ ಅನೇಕ ಕಲಾವಿದರು, ರವಿವರ್ಮ, ಎಸ್.ಎಮ್.ಪಂಡಿತರು ಅನೇಕ ದೇವತೆಗಳ ಚಿತ್ರಗಳನ್ನು ರಚನೆ ಮಾಡಿದ್ದಾರೆ. ಅವುಗಳಲ್ಲಿ ಈ ರೀತಿಯ ವೈವಿಧ್ಯಮಯವಾದ ಶಿಲ್ಪಕ್ಕೆ ಸೀರೆ ಉಡಿಸಿದ ಕಲಾಕೃತಿ ಕಂಡುಬಂದಿಲ್ಲ. ಈ ಚಿತ್ರವು ಸಮಕಾಲೀನ ವಾತಾವರಣದ ಅರಿವನ್ನು ಮೂಡಿಸುತ್ತದೆ. ಇದಕ್ಕೆ ಉದಾಹರಣೆ ಎಂದರೆ ಅನೇಕ ದೇವಸ್ಥಾನಗಳಲ್ಲಿ ಇಂತಹ ದೃಶ್ಯಗಳು ಕಂಡುಬರುತ್ತವೆ. ಇವರು ತಮ್ಮ ಜೀವನದಲ್ಲಿ ಅನೇಕ ಕಲಾಕೃತಿಗಳನ್ನು ರಚನೆ ಮಾಡಿದ್ದಾರೆ. ಅದರಲ್ಲಿ ದೇವತೆಯ ಚಿತ್ರಗಳು ಕೂಡ ಅನೇಕ ಇವೆ. ಈ ಚಿತ್ರವನ್ನು ಸಹ ಪೋಸ್ಟರ್ ಮಾಧ್ಯಮದಿಂದ ಮಾಡಿದ್ದಾರೆ.

**ಗೌರಿ**

ಎನ್.ಸಿ.ದೇಸಾಯಿಯವರು ರಚನೆ ಮಾಡಿದ ಗೌರಿ ಈ ಚಿತ್ರದಲ್ಲಿ ಚಂದ್ರಕಲ ಆಗಿ ಕಂಡುಬರುತ್ತದೆ ಎಂಬುವುದು. ಈ ಕೃತಿಯನ್ನು ಗಮನದಿಂದ ನೋಡಿದರೆ ಗೊತ್ತಾಗುತ್ತದೆ. ಎನ್.ಸಿ.ದೇಸಾಯಿಯವರ ಮೇಲೆ ಮಹಾರಾಷ್ಟ್ರದ ಪ್ರಭಾವ ಎಷ್ಟಿದೆ ಎಂಬುದು ಈ ಕೃತಿಯಿಂದ ತಿಳಿಯುತ್ತದೆ. ಗೌರಿಗೆ ಧರಿಸಿದ ಮೂಗನತ್ತು ಮಹಾರಾಷ್ಟ್ರ ಶೈಲಿಯದಾಗಿದೆ. ಕರ್ನಾಟಕದ ಕಾಸಿನ ಸರ ಈ ಚಿತ್ರದಲ್ಲಿ ನೋಡಲು ಸಿಗುತ್ತದೆ. ಈ ಚಿತ್ರದಲ್ಲಿ ಕಲಾವಿದನ ಪರಿಸರ, ಅವನ ವಾಸ್ತವವಾದ ಪ್ರಾಂತೀಯ ಧರ್ಮ ಜೊತೆಗೆ ಮನಸ್ಸಿನ ಸ್ಥಿತಿಗತಿಗಳು ಈ ಚಿತ್ರದ ಮೂಲದಲ್ಲಿ ಕಂಡುಬರುತ್ತವೆ. ಬಸವಣ್ಣನ ವಚನಗಳು ಇವರಿಗೆ ತುಂಬ ಇಷ್ಟ ಆದ್ದರಿಂದ ಬಸವಣ್ಣನ ಪ್ರತಿರೂಪದಲ್ಲಿ ಕಂಡುಬರುವ ಕಿರೀಟ ಗೌರಿಯ ನೆತ್ತಿಯ ಮೇಲೆ ಇರುವ ಕಿರೀಟ ನೋಡಿದರೆ ಎರಡೂ ಒಂದೇ ರೀತಿಯಾಗಿ ಕಂಡುಬರುತ್ತವೆ. ಎನ್.ಸಿ.ದೇಸಾಯಿಯವರು ರಚಿಸಿದ ಈ ಕೃತಿ ಎನ್.ಸಿ.ದೇಸಾಯಿಯವರ ವ್ಯಕ್ತಿತ್ವದ ಶ್ರೀಮಂತಿಕೆಯನ್ನು ಪ್ರತಿನಿಧಿಸುತ್ತದೆ.

## ೨. ನಿಸರ್ಗ ವರ್ಣಚಿತ್ರಗಳು

ಬ್ರಿಟೀಷರು ಭಾರತಕ್ಕೆ ಬಂದ ನಂತರ ಅವರು ನಮ್ಮ ದೇಶದ ವಾಸ್ತು ಕಟ್ಟಡಗಳು ಮತ್ತು ಶಿಲ್ಪಗಳು ಅವರ ಮನಸ್ಸನ್ನು ಸೂರೆಗೊಂಡವು ಹಾಗು ಇನ್ನೂ ಕಲರ್ ಕ್ಯಾಮರಾ ಬಂದಿರಲಿಲ್ಲ ಆದ್ದರಿಂದ ಅವರಿಗೆ

ಭಾರತೀಯ ವಾಸ್ತು ಕಟ್ಟಡಗಳನ್ನು ಅವರ ದೇಶದ ಜನರಿಗೆ ಅಥವಾ ಆತ್ಮೀಯರಿಗೆ, ಬಂಧುಗಳಿಗೆ ತೋರಿಸಲು ಚಿತ್ರಗಳನ್ನು ತಯಾರಿಸಿಕೊಂಡು ಅವರ ಹಬ್ಬ ಹರಿದಿನಗಳಿಗೆ ಕಳಿಸಿಕೊಡುತ್ತಿದ್ದರು.

ಭಾರತದಲ್ಲಿ ಅತಿಯಾದ ಉಷ್ಣ ಮತ್ತು ಬಿಸಿಲು ಜೊತೆಗೆ ಧೂಳು ಇರುವದರಿಂದ ಮನೆಯಿಂದ ಆಚೆ ಹೋಗಿ ತೈಲವರ್ಣದ ಚಿತ್ರ ರಚನೆ ಮಾಡುವುದು ಕಷ್ಟವೆಂದು ನೈಸರ್ಗಿಕವಾದ ಜಲವರ್ಣಗಳಿಂದ ಚಿತ್ರಗಳನ್ನು ತಯಾರಿಸಿಕೊಂಡು ಅವರ ದೇಶಗಳಿಗೆ ಕಳಿಸುತ್ತಿದ್ದರು. ಜಲವರ್ಣಗಳು ಬೇಗನೆ ಒಣಗಿ ಬಿಡುತ್ತಿದ್ದವು ಅದಕ್ಕೆ ತೈಲ ವರ್ಣದಷ್ಟು ಸಮಯ ಬೇಡ. ಜಲವರ್ಣ ಚಿತ್ರಗಳನ್ನು ಸಾಮಾನ್ಯವಾಗಿ ಕಾಗದದ ಮೇಲೆ ಚಿತ್ರಿಸುತ್ತಾರೆ. ಬಣ್ಣಗಳನ್ನು ನೀರಿನಲ್ಲಿ ಮಿಶ್ರಣಮಾಡಿ ಚಿತ್ರಗಳನ್ನು ರಚಿಸುತ್ತಿದ್ದರು. ಒಂದು ಬಗೆಯ ಕಾಗದ ಜಲವರ್ಣ ಮಾಧ್ಯಮಕ್ಕೆಂದೇ ವಿಶೇಷವಾಗಿ ತಯಾರಿಸಲ್ಪಟ್ಟಿದೆ. ಈ ಕಾಗದವು ಸಾಕಷ್ಟು ತೂಕವನ್ನು ದೃವ್ಯತೆಯನ್ನು ಹೊಂದಿರುವುದಷ್ಟೇ ಅಲ್ಲದೆ ಬಹಳ ನೀರಾದ ಮೇಲೆ ಬಳಸಿದ್ದಾಗ್ಯೂ ತಾನು ಶಿಥಿಲಗೊಳ್ಳುವುದಿಲ್ಲ ಕೈ ಕಾಗದ ಎಂದು ಕರೆಯಿಸಿಕೊಳ್ಳುವ ಈ ಬಗೆಯ ಕಾಗದದಲ್ಲಿ ಜಲದೊಂದಿಗೆ ವರ್ಣಗಳೂ ಆಳಪದರಗಳಿಗೆ ಇಳಿದು ಸ್ಥಿರವಾಗಿ ನಿಲ್ಲುವಂತಾಗುತ್ತದೆ. ಎನ್.ಸಿ.ದೇಸಾಯಿಯವರ ಭಾವಚಿತ್ರಗಳು, ನಿಸರ್ಗ ಚಿತ್ರಗಳು ಭೂದೃಶ್ಯ ಚಿತ್ರಗಳು, ಮುಂತಾದ ಚಿತರಗಳಲ್ಲಿ ಜಲವರ್ಣ ಕಲಾಕೃತಿಗಳನ್ನು ಕಾಣಬಹುದು. ಎಲ್ಲದಕ್ಕೂ ಮುಖ್ಯವಾಗಿ ಈ ಮಾಧ್ಯಮದಲ್ಲಿ ಅವರು ಭೂದೃಶ್ಯಗಳನ್ನು ಮತ್ತು ನಿಸರ್ಗ ಚಿತ್ರಗಳನ್ನೇ ಹೆಚ್ಚಾಗಿ ರಚಿಸಿರುವುದು ಕಂಡುಬರುತ್ತದೆ.

ಎನ್.ಸಿ.ದೇಸಾಯಿಯವರು ನಿಸರ್ಗ ಚಿತ್ರಗಳನ್ನು ಅವರ ಅಧ್ಯಯನದ ಸಮಯದಲ್ಲಿ ಬಹಳಷ್ಟು ಮಾಡಿದ್ದಾರೆ. ಇತ್ತೀಚಿಗೆ ಅವರು ಸಂಯೋಜನ ಚಿತ್ರಗಳು ಜಲವರ್ಣಗಳಿಂದ ರಚನೆಯಾಗಿವೆ. ಜಲವರ್ಣವೆಂಬುದು ಸರಳವಾದ ಮಾಧ್ಯಮವಲ್ಲ. ಪಾರದರ್ಶಕ ವರ್ಮವಾದರೂ ಬಳಸುವಾಗ ಮಾತ್ರ ಎಚ್ಚರಿಕೆ ವಹಿಸಬೇಕು. ಯಾಕೆಂದರೆ ಒಂದು ಸಾರಿ ನಾವು ವರ್ಣಗಳನ್ನು ಬಳಸುವಲ್ಲಿ ಹೆಚ್ಚು ಕಡಿಮೆ ಮಾಡಿದರೆ ಚಿತ್ರವು ಸಂಪೂರ್ಣವಾಗಿ ಹೆಚ್ಚು ಕಡಿಮೆ ಮಾಡಿದರೆ ಚಿತ್ರವು ಸಂಪೂರ್ಣವಾಗಿ ಕೆಟ್ಟು ಹೋಗುತ್ತದೆ. ಈ ವರ್ಣದಲ್ಲಿ ಒಮ್ಮೆ ಅದು ಕೆಟ್ಟು ಹೋದರೆ ಮತ್ತೆ ಅದನ್ನು ಸರಿಪಡಿಸಲಾಗುವುದಿಲ್ಲ. ಜಲವರ್ಣವು ಪಾರದರ್ಶಕವಾಗಿ ಕಂಡರೂ ಚಿತ್ರದಲ್ಲಿ ಒಂದು ವಿಶೇಷತೆಯನ್ನು ಮೂಡಿಸಬಲ್ಲ ಮಾಧ್ಯಮವಾಗಿದೆ.

Repeat

**ಬನಶಂಕರಿ**

ಬಾದಾಮಿ ಬನಶಂಕರಿ ಐತಿಹಾಸಿಕ ಸ್ಥಳಗಳು ಇಲ್ಲಿಯ ಪ್ರಕೃತಿ ಸೌಂದರ್ಯ ವಿಸ್ಮಯವಾಗಿದೆ. ಎನ್.ಸಿ.ದೇಸಾಯಿಯವರು ರಚನೆಮಾಡಿದ ಈ ನಿಸರ್ಗದ ಚಿತ್ರದಲ್ಲಿ ಬನಶಂಕರಿ ದೇವಾಲಯ ಮತ್ತು ಅದರ ಮುಂದೆ ಇರುವ ಹೊಂಡ ಕಂಡುಬರುತ್ತದೆ. ಈ ಕಲಾಕೃತಿಯನ್ನು ಜಲವರ್ಣದಿಂದ ೨೦೦೦ರಲ್ಲಿ ಮಾಡಿದ್ದಾರೆ.

**ಶೃಂಗೇರಿ**

ಶೃಂಗೇರಿ ಶಾರದೆ ಕರ್ನಾಟಕದ ಐತಿಹಾಸಿಕ ಮತ್ತು ಧಾರ್ಮಿಕ ಸ್ಥಳವಾಗಿದೆ. ಎನ್.ಸಿ.ದೇಸಾಯಿಯವರು ರಚನೆ ಮಾಡಿದ ಈ ದೇವಸ್ಥಾನದ ಚಿತ್ರ ರಚನೆ ಮಾಡಿದ ಈ ದೇವಸ್ಥಾನ ಚಿತ್ರವನ್ನು ಪೋಸ್ಟರ್ ಮಾಧ್ಯಮದ ಮೂಲಕ ರಚನೆ ಮಾಡಿದ್ದಾರೆ. ಈ ಸಂಯೋಜನೆಯಲ್ಲಿ ದೇವಸ್ಥಾನಕ್ಕೆ ಹೆಚ್ಚು ಮಹತ್ವ ನೀಡಿ ನೀಲ ಆಕಾಶವು ಸಹ ಶಾಂತವಾಗಿ ಕಂಡುಬರುತ್ತದೆ.

**ನಿಸರ್ಗದ ಚಿತ್ರ**

ಎನ್.ಸಿ.ದೇಸಾಯಿಯವರು ರಚನೆ ಮಾಡಿದ ಈ ಪ್ರಕೃತಿಯ ಚಿತ್ರವು ಜಲವರ್ಣದಿಂದ ಮೂಲಕ ಬಂದಿದೆ. ಈ ಚಿತ್ರ ನೋಡಿದಾಗ ನೀರಿನಲ್ಲಿ ಕಂಡುಬರುವ ಗಿಡಗಳು ಪಾರದರ್ಶಕದ ಅನುಭವವಾಗುತ್ತದೆ. ದಂಡೆಯ ಮೇಲೆ ನಿಂತ ಗಿಡಗಳು ಸುಂದರವನ್ನು ಮತ್ತಷ್ಟು ಸುಂದರ ಗೊಳಿಸಿವೆ ಎಂದರೆ ತಪ್ಪಿಲ್ಲ.

**ಬದಾಮಿ**

ಈ ಬಾಗಿಲ ಒಳಗೆ ಹಾದುಹೋದರೆ ಸಿಗುತ್ತದೆ. ಈ ಚಿತ್ರವು ಪೋಸ್ಟರ್ ಮಾಧ್ಯಮದಿಂದ ಮಾಡಲಾಗಿದೆ. ಎನ್.ಸಿ.ದೇಸಾಯಿಯವರು ರಚನೆ ಮಾಡಿದ ನಿಸರ್ಗ ಚಿತ್ರಗಳು ಸುಮಾರು ಎಲ್ಲಾ ಪತ್ರಿಕೆಗಳಲ್ಲಿ ಪ್ರಕಟಣೆಗೊಂಡಿವೆ.

**ಬಿಜಾಪುರ**

ಈ ಎರಡು ಚಿತ್ರಗಳು ಜಲವರ್ಣದಿಂದ ರಚನೆಗೊಂಡಿವೆ. ಎನ್.ಸಿ.ದೇಸಾಯಿಯವರು ಅನೇಕ ಜಲವರ್ಣದ ಕಲಾಕೃತಿಗಳನ್ನು ರಚನೆ ಮಾಡಿದ್ದಾರೆ ಅವುಗಳಲ್ಲಿ ಈ ಎರಡು ಚಿತ್ರಗಳು ಇದೆ. ಎನ್.ಸಿ.ದೇಸಾಯಿಯವರ ಯಾವುದೆ ಮಾಧ್ಯಮದ ಮುಖಾಂತರ ಕಲಾಕೃತಿ ರಚನೆ ಮಾಡಿದರೂ ಕೂಡ ಅದರಲ್ಲಿ ತಮ್ಮದೇ ಆದ ವೈವಿಧ್ಯತೆಯನ್ನು ವ್ಯಕ್ತಪಡಿಸುವುದು ಇವರಲ್ಲಿರುವ ವಿಶೇಷ.

## ೮. ಮುಖಪುಟ ವಿನ್ಯಾಸ ಮತ್ತು ಕ್ಯಾಲೆಂಡರ್ ವಿನ್ಯಾಸಗಳು

ಎನ್.ಸಿ.ದೇಸಾಯಿಯವರು ೧೯೫೦ರಿಂದ ದಶಕಗಳವರೆಗೆ ವಿವಿಧ ಪತ್ರಿಕಗಳ ಹೊದಿಕೆಗಾಗಿ ಚಿತ್ರಗಳನ್ನು ಚಿತ್ರಿಸಿಕೊಟ್ಟಿದ್ದಾರೆ. ಜೊತೆಗೆ ಛಾಯಾಚಿತ್ರಗಳನ್ನು ತೆಗೆದುಕೊಟ್ಟಿದ್ದಾರೆ. ಇವುಗಳಲ್ಲಿ ಮಾಸ ಪತ್ರಿಕೆಗಳು, ತ್ರೈಮಾಸಿಕ ಪತ್ರಿಕೆಗಳು, ವಾರಪತ್ರಿಕೆಗಳು ಮತ್ತು ಪುಸ್ತಕಗಳಿಗೂ ಕಲಾಕೃತಿಗಳನ್ನು ರಚನೆ ಮಾಡಿಕೊಟ್ಟಿದ್ದಾರೆ. ಇವರು ರಚನೆ ಮಾಡಿದ ಕೆಲವು ಕಲಾಕೃತಿಗಳನ್ನು ಯಾವ ಯಾವ ಪತ್ರಿಕೆಗಳಲ್ಲಿ ಪ್ರಕಟವಾಗಿವೆ ಎಂಬುವುದನ್ನು ಈ ಕೆಳಗೆ ಪಟ್ಟಿ ಮಾಡಲಾಗಿದೆ.

| | |
|---|---|
| ಸುಧಾ | ಸುಭಾಷ್‌ಚಂದ್ರಭೋಸ್ |
| ತರಂಗ | ವಲ್ಲಭಬಾಯಿ ಪಟೇಲ |
| ತರಂಗ | ಬೇಂದ್ರೆ |
| ತರಂಗ | ಮಾಸ್ತಿ |
| ಕಸ್ತೂರಿ | ಅಲಂಕಾರಿಕ |
| ಮಯೂರ | ಅಲಂಕಾರಿಕ |
| ಕಸ್ತೂರಿ | ರಾಧಾಕೃಷ್ಣ |
| ಕರ್ಮವೀರ | ಜಾನಪದ |
| ಸುಧಾ | ಪಂಜಾಬ ಗ್ರಾಮೀಣ |
| ಕರ್ಮವೀರ | ಮಂಗಳ ವಾದ್ಯ |
| ಕಸ್ತೂರಿ | ಜಾನಪದ |

ಇವು ಕೆಲವು ಮಾತ್ರ. ಇನ್ನೂ ಅನೇಕ ಪುಸ್ತಕಗಳಿಗೆ. ವಿಶೇಷಾಂಕಗಳಿಗೆ ಅನೇಕ ಮುಖಪುಟ ವಿನ್ಯಾಸಗಳನ್ನು ಮಾಡಿದ್ದಾರೆ. ಇನ್ನೂ ಕೆಲವು ಪತ್ರಿಕೆಗಳಿಗೆ ಖಾಯಂ ಚಿತ್ರಗಳನ್ನು ರಚನೆ ಮಾಡಿ ಕೊಡುತ್ತಿದ್ದರು. ಕೃಷಿಪೇಟೆ ಇದೆ ತರಹ ಅನೇಕ ಸರಕಾರಿ ಸಂಸ್ಥೆಗಳು ಇವರು ಮುಖಪುಟಗಳನ್ನು ರಚನೆ ಮಾಡಿಕೊಟ್ಟಿದ್ದರು. ಇವರು ಪುಟಗಳನ್ನು ಹಿಂದಿ, ಕನ್ನಡ, ಮರಾಠಿ ಪುಸ್ತಕಗಳಿಗೂ ರಚನೆಮಾಡಿ ಕೊಟ್ಟಿದ್ದಾರೆ. ಎಸ್.ಸಿ.ದೇಸಾಯಿಯವರು ಬರೆದ ವಿವೇಕಾನಂದರ ಅನೇಕ ಕಲಾಕೃತಿಗಳು ಕ್ಯಾಲೆಂಡರ್ ವಿನ್ಯಾಸಗಳಾಗಿ ದೇಶದ ಅನೇಕ ಮನೆಗಳಿಗೆ ಸೇರಿವೆ. ಜೊತೆ ಇವರು ಬರೆದ ವಿವೇಕಾನಂದ ಕ್ಯಾಲೆಂಡರ್‌ಗಳನ್ನು ದೇಶದ ನಾನಾ ಕಡೆ ಪ್ರದರ್ಶಗಳನ್ನು ಕೂಡ ಮಾಡಿದ್ದಾರೆ ಇವರು ಬರೆದು ಕೊಟ್ಟ ಚಿತ್ರಗಳು ಕೇವಲ ಮುಖಪುಟ ಮತ್ತು ಕ್ಯಾಲೆಂಡರ್ ವಿನ್ಯಾಸವಾಗದೆ ಅನ್ಯ ಉಪಯೋಗದ ಟೇಬಲ್ ಸ್ಟಾಂಡ್ ಮತ್ತು ಲ್ಯಾಮಿನೇಷನಗಳು ಆಗಿ ಕೆಲವು ಕಛೇರಿಗಳಲ್ಲಿ ಸೇರಿವೆ. ಕೆಲವು ಮೂಮೆಂಟುಗಳನ್ನು ಕೂಡ ಮಾಡಿದ್ದಾರೆ. ಈ ರೀತಿಯಾಗಿ ಅವರ ಕಲಾಕೃತಿಗಳು ನಾನಾ ರೂಪ ಪಡೆದುಕೊಂಡಿವೆ. ಕ್ರಿ.ಶ. ೧೯೫೦ರಿಂದ ಎಲ್ಲ ಪತ್ರಿಕೆಗಳ ಮುಖಪುಟಗಳನ್ನು ವೀಕ್ಷಿಸಿದರೆ ಪ್ರಾಯಶಃ ನಮ್ಮ ಹೆಚ್ಚು ಮುಖಪುಟ ವಿನ್ಯಾಸ ಎಸ್.ಸಿ.ದೇಸಾಯಿಯವರಿಂದಲೇ ರಚನೆಯಾಗಿದ್ದು ಕಂಡುಬರುತ್ತದೆ.

ಈ ಪ್ರಬಂಧ ರಚನೆಗೆ ಅವಧಿಯು ಮಿತಿಯಿಲ್ಲ ಕ್ಷೇತ್ರಕಾರ್ಯ ಮಾಡಿದಾಗ ದೊರೆತ ಕೆಲವು ಮುಖಪುಟಗಳನ್ನು ಮಾತ್ರ ಪಟ್ಟಿ ಮಾಡಲಾಗಿದೆ. ಎಸ್.ಸಿ.ದೇಸಾಯಿಯವರ ೫ ದಶಕಗಳ ಮುಖಪುಟಗಳನ್ನು ನೋಡಿದರೆ ಅವೆಷ್ಟು ಸಿಗುತ್ತಾವೊ ಗೊತ್ತಿಲ್ಲ.

## ೯. ಸಂಯೋಜನ ವರ್ಣಚಿತ್ರಗಳು

### ಕೊಡ ಹೊತ್ತ ಮಹಿಳೆ

ನೆತ್ತಿ ಮ್ಯಾಗ, ಕೊಡ ಹೊತ್ತು
ಎಲ್ಲಿಗೆ ಹೊಂಟಿಯಾ ಬೇ

ಈ ಭಾರತೀಯ ಸಂಸ್ಕೃತಿಯನ್ನು ತನ್ನದಾಗಿ ಮಾಡಿಕೊಂಡು ನೀರಿಗೆ ಹೊರಟ ಆಕೆ, ನೇರ ನೋಟದಿಂದ ನೋಡುತ್ತಾಳೆ. ಶೃಂಗಾರ ಮಾಡಿಕೊಂಡು ಹೊರಡಲು ಈ ಚಿತ್ರವು ಕೊಡದಲ್ಲಿ ನೀರು ತುಂಬಿ ತುಳುಕದಿದ್ದರೂ ಪರವಾಗಿಲ್ಲ. ಚಿತ್ರವು ಅಲಂಕಾರದಿಂದ ತುಂಬಿ ತುಳುಕುತ್ತಿದೆ. ಚಿತ್ರ ನೈಜ ಸಂಯೋಜನೆಯಾಗಿದ್ದು, ಪೋಸ್ಟರ್ ಮಾಧ್ಯಮದಿಂದ ಮಾಡಿದ್ದಾರೆ. ಇದರಲ್ಲಿ ಇರುವ ಬಣ್ಣಗಳ ಭಾಷೆ ಎಲ್ಲರನ್ನು ಸಂಪಾದಿಸುತ್ತದೆ.

### ಮಣಿ ಪೋಣಿಸುತ್ತಿರುವ ಹುಡುಗಿ

ಭಾರತೀಯ ಸಂಸ್ಕೃತಿಯು ಅನನ್ಯ, ಧರ್ಮ, ಭಾಷೆಗಳು ಕೂಡ ಅನನ್ಯ, ಅದೇ ರೀತಿಯಲ್ಲಿ ವೇಷ ಭೂಷಣಗಳು ಕೂಡ ಅನನ್ಯ, ಇಂಥ ಅನನ್ಯವಾದ ಸಂಸ್ಕೃತಿ ಇಂದಿಗೂ, ನಮ್ಮ ದೇಶದ ಗ್ರಾಮಾಂತರ ಸ್ಥಳಗಳಲ್ಲಿ ನೋಡಲು ಸಿಗುತ್ತದೆ. ಎನ್.ಸಿ.ದೇಸಾಯಿಯವರ ರಚಿಸಿದ ಅನನ್ಯವಾದ ಚಿತ್ರಗಳೊಂದು ಮಣಿ ಪೋಣಿಸುತ್ತಿರುವ ಹುಡುಗಿಯ ಚಿತ್ರ ಕೊರಳಲ್ಲಿ ಬಳ್ಳಿಯ ಕಡಿಗ ಧರಿಸಿ ಕೈಯಗಳಿಗೆ ಬೆಳ್ಳಿಯ ಬಳೇ ತೊಟ್ಟ ಯುವತಿ ಮಣಿಗಳನ್ನು ಪೋಣಿಸುತ್ತಿದ್ದಾಳೆ. ಈ ಚಿತ್ರ ನೈಜವಾದ ಕಲಾಕೃತಿಯಾಗಿದ್ದು ಪೋಸ್ಟರ್ ಮಾಧ್ಯಮದಿಂದ ಈ ಕಲಾಕೃತಿ ರಚನೆಯಾಗಿದೆ.

### ಮಾಲೆ ಕಟ್ಟುತ್ತಿರುವ ಯುವತಿ

ನೀನೇ ಒಂದು ಕುಸುಮವಾಗಿ,
ಕುಸುಮಗಳನ್ನು ಕಟ್ಟಿ,
ಯಾರಿಗೆ ಮಾಲೆ ಹಾಕಲು
ಲೆಕ್ಕವಾಗುತ್ತಿದ್ದೆಯೆ ನೀ ವೈಯ್ಯಾರಿ

ಈ ಕಲಾಕೃತಿಯಲ್ಲಿ ಎಸ್.ಸಿ. ದೇಸಾಯಿಯವರ ಪರಿಪಕ್ವವಾದ ಕಲಾಶೈಲಿಯು ಕಂಡುಬರುತ್ತದೆ. ಇದರಲ್ಲಿ ಮಾಲೆ ಕಟ್ಟುತ್ತಿರುವ ಯುವತಿ ತಾನೇ ಒಂದು ಸುಂದರವಾದ ಹೂವು ಎಂಬುವುದನ್ನು ಮರೆತು ಹೂವಿನ ಮಾಲೆ ಕಟ್ಟಿ, ಮಾಲೆ ಲೆಕ್ಕವಾಕುತ್ತಿದ್ದಾಳೆ. ಈ ಚಿತ್ರದ ವರ್ಣಗಳು ಒಂದು ಸಿಹಿಯಾದ ಅನುಭವವನ್ನು ನೀಡುತ್ತವೆ. ಈ ಚಿತ್ರವು ಆಧುನಿಕವಾದರೂ ಇದರಲ್ಲಿ ಸಾಂಪ್ರದಾಯಿಕ ಭಾಷೆ ಸಾಹಿತ್ಯವಿದೆ. ಈ ಕಲಾಕೃತಿಯ ಮಾಧ್ಯಮ ಪೋಸ್ಟರ್ ಬಣ್ಣಗಳಿಂದ ಮಾಡಿದ್ದಾರೆ. ಇದರಲ್ಲಿ ರೂಪ, ಲಾವಣ್ಯಗಳ ಜೊತೆಗೆ ಪ್ರಮಾಣಬದ್ಧವಾಗಿದೆ.

**ಶಕುಂತಲೆ**

ಶಕುಂತಲೆ ಜಿಂಕೆಗೆ ಹುಲ್ಲು ಮೇಯಿಸುತ್ತಿದ್ದಾಳೆ. ಜಿಂಕೆ ಹುಲ್ಲು ಮೇಯುವುದನ್ನು ಬಿಟ್ಟು ಕಣ್ಣಿನ ನೋಟದಿಂದ ಶಕುಂತಲೆಯನ್ನೇ ಮೇಯುತ್ತಿದೆ. ಈ ಕಲಾಕೃತಿ ಆಧುನಿಕ ಶೈಲಿಯಲ್ಲಿ ರಚನೆಗೊಂಡಿದೆ. ಈ ಚಿತ್ರವನ್ನು ಸ್ಪ್ರೇವರ್ಕ್ ಎಂದು ಹೇಳಬಹುದು. ಇದು ಒಂದು ಆಧುನಿಕ ಯಂತ್ರದಿಂದ ತಯಾರಿಮಾಡಿದ ಚಿತ್ರ. ಇದರಲ್ಲಿ ಇರುವ ವರ್ಣಗಳು ಕೂಡ ಅಷ್ಟೇ ಆಧುನಿಕವಾಗಿವೆ. ಈ ಚಿತ್ರ ಪೋಸ್ಟರ ಮಾಧ್ಯಮದಿಂದ ಸ್ಪ್ರೈ ಮಾಡಿ ರಚಿಸಲಾಗಿದೆ.

**ಬಾಲೆ**

ಕಾದಿರುವೆ ನೀ ಎಲ್ಲಿರುವೆ? ಎನ್ನುವ ನೋಟವು ಈ ಬಾಲೆಯದಾಗಿದೆ. ನೀರಿಗೆ ಬಂದವಳು ಕಾದು ಕೂತಿಗಳು ಪಕ್ಕದಲ್ಲಿ ಇರುವ ಕೊಡ ಪಕ್ಕಕ್ಕೆ ನುಖಮಾಡಿದೆ. ಕೆಂಪು ರವಿಕೆ ಧರಿಸಿ, ಸೊಂಟಕ್ಕೆ ಅರಿವಿ ಬಿಗಿದು, ನೆತ್ತಿ ಮ್ಯಾಗ್ ದಾಸವಾಳವನ್ನು ಮುಡಿಯ, ಬಳ್ಳಿಯಾಗ ಗಿಡಿದ ಟೊಂಗೆ ಓಡಿದು ಕುಂತ ಬಾಲೆ, ಕಾದಿರುವೆ ನೀ ಎಲ್ಲಿರುವೆ ಎಂದಿದೆ ಈ ಬಾಲೆಯ ನೋಟ. ಈ ಚಿತ್ರವು ಪೋಸ್ಟರ್ ಮಾಧ್ಯಮದಲ್ಲಿ ಮೂಡಿಬಂದಿದೆ.

**ಬೆರಗಿನಿಂದ ನಿರೀಕ್ಷಿಸುತ್ತಿರುವ ಬಾಲೆ**

ಹದಿನಾರರ ಹರೆಯದ ಈ ಬಾಲೆ ಬೆರಗಿನಿಂದ ನಿರೀಕ್ಷಿಸುತ್ತಿದ್ದಾಳೆ. ಹರಿಯಾಣದ ಉಡುಪಿನಲ್ಲಿ ಇರುವ ಇವಳ, ನೋಟದಲ್ಲಿ ಅದೇನನ್ನೂ ಆಶ್ಚರ್ಯಚಕಿತವಾಗಿ ನೋಡುತ್ತಿದ್ದಾಳೆ. ಈ ಚಿತ್ರವು ಜಲವರ್ಣದಿಂದ ಮಾಡಿದ್ದಾರೆ. ಎಸ್.ಸಿ.ದೇಸಾಯಿಯವರು ರಚಿಸಿದ ಅನೇಕ ಕಾಲಕೃತಿಗಳು ನಾಡಿನ ಪ್ರಖ್ಯಾತ ಪತ್ರಿಕೆಗಳಲ್ಲಿ ಪ್ರಕಟವಾಗಿದೆ.

ಇವರಮ ಜಲವರ್ಣದಲ್ಲಿ ಪಳಗಿದ ಕೈ. ಇವರದು ಎರಡು ಮೂರು ಸ್ಟ್ರೋಕ್‌ಗಳಲ್ಲಿ ಒಂದು ಚಿತ್ರ ತಯಾರಿಸಿ ಪತ್ರಿಕೆಗಳಿಗೆ ಕಳಿಸಿಕೊಡುತ್ತಿದ್ದರೆ. ಅನೇಕ ಪತ್ರಿಕೆಗಳಿಂದ ಇವರ ಕಲಾಕೃತಿಗಳಿಗೆ ಮತ್ತು ಕಲಾ ಲೇಖನಗಳಿಗೆ ಬೇಡಿಕೆಗಳ ಪತ್ರಗಳು ಬರುತ್ತಿದ್ದವು.

**ಪ್ರಣಯದಲ್ಲಿರುವ ಪ್ರೇಮಿಗಳು**

ಎಸ್.ಸಿ.ದೇಸಾಯಿಯವರು ರಚಿಸಿರುವ ಈ ಚಿತ್ರವನ್ನು ನೋಡಿದರೆ ಒಬ್ಬ ಯುವಕ ಯುವತಿಯ ತೋಳುಗಳನ್ನು ಓಡಿದುಕೊಂಡಿದ್ದಾನೆ. ಆ ಯುವತಿಯ ಕೈಯಲ್ಲಿ ಕುಸುಮ ಇದ್ದು, ಆ ಕುಸುಮದಿಂದ ಬೆಂಕಿಯನ್ನು ಆರಿಸುತ್ತಿರುವ ರೀತಿಯಲ್ಲಿ ಕಂಡುಬರುತ್ತದೆ ಅಥವಾ ಬೆಂಕಿಗೆ ಹೂವು ಓಡಿದಿರುವ ರೀತಿಯಲ್ಲಿ ಕಂಡುಬರುತ್ತದೆ. ಬೆಂಕಿಯನ್ನು ಹೂವು ಆರಿಸುತ್ತಿರುವುದು ಈ ಎರಡು ಬೇರೆ ಬೇರೆ ರೀತಿಯ ಅರ್ಥಗಳನ್ನು ಕೊಡುತ್ತವೆ. ನೋಡುಗನು ಇದನ್ನು ಎರಡು ಅರ್ಥಗಳಲ್ಲಿ ಅರ್ಥಯಿಸಿಕೊಳ್ಳಬಹುದು ೧. ಕಾಮವನ್ನು

ಆರಿಸುತ್ತಿರುವುದು ಅಥವಾ ೨. ಕಾಮಕ್ಕೆ ಸ್ಪಂದಿಸುತ್ತಿರುವುದು ಎಂದು ಹೇಳಬಹುದು ಇದು ನೋಡುಗರ ಮೇಲೆ ಆಧಾರವಾಗಿರುತ್ತದೆ. ಎನ್.ಸಿ.ದೇಸಾಯಿಯವರ ಈ ಕೃತಿ ಪ್ರಣಯದಲ್ಲಿ ಲೀನವಾಗಿರುವ ಪ್ರೇಮಿಗಳು. ಈ ಚಿತ್ರವನ್ನು ಪೋಸ್ಟರ್ ಮಾಧ್ಯಮದಿಂದ ಮಾಡಲಾಗಿದೆ.

**ಮೇಳದವರು**

ಎನ್.ಸಿ.ದೇಸಾಯಿಯವರ ಜೀವನದಲ್ಲಿ ಪ್ರಥಮ ಸಲ ಆಧುನಿಕ ಶೈಲಿಯಲ್ಲಿ ಈ ಕೃತಿಯನ್ನು ರಚನೆ ಮಾಡಿದ್ದಾರೆ. ಇವರದು ಆಧುನಿಕ ಶೈಲಿಯ ಇದೇ ಮೊದಲ ಮತ್ತು ಇದೇ ಕೊನೆಯ ಕೃತಿ. ಈ ಚಿತ್ರರಚನೆ ಮಡಲು ಸ್ಫೂರ್ತಿ ಏನೋ ಗೊತ್ತಿಲ್ಲ. ಇದಾದ ಮೇಲೆ ನಂತರ ಆಧುನಿಕ ಶೈಲಿಯ ಕಲಾಕೃತಿಗಳನ್ನು ರಚನೆ ಮಾಡಲೇ ಇಲ್ಲ ಪ್ರಾಯಶಃ ಇವರಿಗೆ ಮನಸ್ಸಿಗೆ ಇಷ್ಟವಾಯಿತೋ ಇಲ್ಲವೋ ಎಂಬುವುದು ತಿಳಿಯಲಿಲ್ಲ. ಒಟ್ಟಾರೆ ಹೇಳಬೇಕು ಎಂದರೆ ಈ ಕೃತಿ ಕ್ಯೂಬಿಸಂ ಶೈಲಿಯ (ಘನಕೃತಿ)ಯಾಗಿದೆ. ಇದರಲ್ಲಿ ಮೇಳದವರು ಮೃದಂಗ ಮತ್ತು ಶಹನಾಯಿಗಳನ್ನು ನುಡಿಸುತ್ತಿ ನ್ದಾರೆ. ಈ ಚಿತ್ರ ತೈಲವರ್ಣದಿಂದ ಮಾಡಿದ್ದಾರೆ ಚಿತ್ರದ ಹಿನ್ನಲೆಯಲ್ಲಿ ಮುಸ್ಸಂಜೆಯ ಹೊತ್ತಾಗಿದೆ ಎಂಗು ತಿಳಿದುಬರುತ್ತದೆ.

## ೧೨. ಕ್ಯಾಮರಾ ಕಣ್ಣಿನಿಂದ ಮೂಡಿದ ಛಾಯಾಚಿತ್ರಗಳು

ಕ್ಯಾಮರಾ ತನ್ನ ಮುಂದಿರುವ ಸೃಷ್ಟಿಯ ಸಮಸ್ತ ವಸ್ತುಗಳನ್ನು ಇದ್ದ ಹಾಗೇ ಸೆರೆ ಹಿಡಿಯುತ್ತದೆ. ಆದಾಗ್ಯೂ ಸೃಷ್ಟಿಯ ಸಮಸ್ತ ವಸ್ತುಗಳನ್ನು ಬೆಳಕಿನ ಮೂಲಕವೇ ಅದು ಗ್ರಹಣ ಮಾಡುವದರಿಂದ ಬೇರೆ ಬೇರೆ ಬೆಳಕಿನ ಸಂದರ್ಭಗಳಲ್ಲಿ ವಸ್ತುಗಳು ಭಿನ್ನವಾಗಿಯೇ ಕಾಣುವುದನ್ನು ನಾವು ಗಮನಿಸಬಹುದಾಗಿದೆ. ಅದೂ ಅಲ್ಲದೆ ಒಂದೇ ಬೆಳಕು ಬೇರೆ ಬೇರೆ ಅಂತರಗಳಿಂದ ಬೇರೆ ಬೇರೆ ಕಡೆಯಿಂದ ಬಿದ್ದಾಗಲೂ ವಸ್ತುವನ್ನು ಭಿನ್ನವಾದ ಹಿನ್ನೆಲೆಯಲ್ಲಿ ನೋಡಿದಾಗಲೂ, ಒಂದೊಂದು ಬಗೆಯಾಗಿ ಗೋಚರಿಸುವದು ನಮಗೆ ತಿಳಿದ ವಿಷಯವೇ ಆಗಿದೆ.

ಅಂತಹ ಒಂದು ಕ್ಯಾಮರಾ ಕಲಾವಿದನ ಕೈಗೆ ಸಿಕ್ಕರೆ. ಆ ಕಲಾವಿದನ ಕ್ಯಾಮರಾ ಕಣ್ಣಿನಿಂದ ಮೂಡಿಬರುವ ಪ್ರತಿಯೊಂದು ಛಾಯಾಚಿತ್ರವೂ ಸಹ ಒಂದು ಕಲಾಕೃತಿಯೆ ಆಗಿ ಮೂಡಿ ಬರುವುದು. ಎನ್.ಸಿ.ದೇಸಾಯಿಯವರು ಕಲಾವಿದರಾಗಿ, ಪತ್ರಕರ್ತರಾಗಿ, ಲೇಖಕರಾಗಿ, ಉತ್ತಮ ಛಾಯಾಚಿತ್ರಕರು ಆಗಿದ್ದರು. ಇವರ ಜೀವನದುದ್ದಕ್ಕೂ ಸಾವಿರಾರು ಛಾಯಾಚಿತ್ರಗಳನ್ನು ತೆಗೆದು ಅನೇಕ ಪತ್ರಿಕೆಗಳಿಗೆ ಮತ್ತು ಅವರು ಬರೆದ ಲೇಖನಗಳಿಗೆ ಉಪಯೋಗಿಸಿಕೊಳ್ಳುತ್ತಿದ್ದರು. ಇವರು ತೆಗೆದ ಛಾಯಾಚಿತ್ರಗಳು ಅನೇಕ ಲೇಖಕರು, ಕಲಾವಿದರು ಕೂಡ ಇವರ ಚಿತ್ರಗಳನ್ನು ಬೇಡಿ ಪಡೆಯುತ್ತಿದ್ದರು. ಇವರು ತೆಗೆದ ಅನೇಕ ಛಾಯಚಿತ್ರಗಳನ್ನು ಅನೇಕ ಮುಖಪುಟಗಳಿಗೆ ಬಳಸಲಾಗಿದೆ.

ಇವರು ಸಮಾಜದಲ್ಲಿ ಕಲಾವಿದರು ಅಷ್ಟೇ ಅಲ್ಲದೆ ಪತ್ರಕರ್ತರಾಗಿ ಸುದ್ದಿಗಾರರೂ ಸಹ ಆಗಿ ಕಾರ್ಯನಿರ್ವಹಿಸಿದ್ದಾರೆ. ಇವರು ಎಲ್ಲೇ ಹೋದರು ಜೊತೆಗೆ ಕ್ಯಾಮರಾ ಇರುತ್ತಿತ್ತು. ಅವರಿಗೆ ವಿಶೇಷ ಎನಿಸಿದರೆ ಸಾಕು ತಕ್ಷಣ ಕ್ಯಾಮರಾದ ಕಣ್ಣಿನಿಂದ ಫೋಟೋ ತೆಗದು ಬಿಡುತ್ತಿದ್ದರು. ಅದಕ್ಕೆ ಉದಾಹರಣೆಯಾಗಿ ಹೇಳಬೇಕು ಎಂದರೆ ಮುಂಬೈನಲ್ಲಿ ರೋಡ್‌ಗಳ ಪಕ್ಕದಲ್ಲಿ ದೇವರ ಚಿತ್ರಗಳ ಬಿಡಿಸಿರುವುದನ್ನು ಇವರ ಕಣ್ಣಿಗೆ ಬಿದ್ದ ತಕ್ಷಣವೇ ಫೋಟೋ ತೆಗೆದು ರೋಡಿಗೆ ಬಂದ ದೇವರು ಎಂದು ಛಾಯಾಚಿತ್ರಗಳ ಜೊತೆಗೆ ಲೇಖನವೂ ಪ್ರಕಟವಾಗಿದೆ. ಈ ರೀತಿ ಅನೇಕ ಜಾತ್ರೆ, ಹಬ್ಬ, ಹರಿದಿನ ಮತ್ತು ಇತರ ವಿಶೇಷ ಕಾರ್ಯಕ್ರಮಗಳಲ್ಲಿ ಫೋಟೋ ತೆಗೆಯುತ್ತಿದ್ದರು. ಅವರು ತೆಗೆದ ಕೆಲವು ಚಿತ್ರಗಳನ್ನು ಮಾತ್ರ ಬಳಸಲಾಗಿದೆ.

ಮುಂಬೈಯಲ್ಲಿ ಇವರು ಪ್ರೀಮಿಯರ್ ಆಟೊಮೊಬೈಲ್ಸ್‌ನ ಜಾಹೀರಾತು ವಿಭಾಗದಲ್ಲಿ ಕಲಾವಿದರಾಗಿ ಮತ್ತು ಛಾಯಾಚಿತ್ರಕರರಾಗಿ ೩೫ ವರ್ಷಗಳ ಕಾಲ ಕಾರ್ಯನಿರ್ವಹಿಸುತ್ತ ಅನೇಕ ಛಾಯಾಚಿತ್ರಗಳನ್ನು ತೆಗೆದಿದ್ದಾರೆ.

### ಇತರ ವರ್ಣಚಿತ್ರಗಳು

ಎನ್.ಸಿ.ದೇಸಾಯಿಯವರು ರಚನೆ ಮಾಡಿದ ನೂರಾರು ಚಿತ್ರಗಳು ಇದ್ದು ಇಲ್ಲಿ ಅಧ್ಯಾಯನದ ಮಿತಿಯಲ್ಲಿ ಚಿತ್ರಗಳನ್ನು ಬಳಸಿಕೊಳ್ಳಲಾಗಿದೆ.

### ಶೇಷಾಚಲೇಶ್ವರ ಮಂದಿರದ ಗೋಪುರ

ನಾರಾಯಣ ಭಗವಾನರ ಆನಂದವನ ನಂತರದ ಕಟ್ಟಡಗಳನ್ನು ಕಟ್ಟಿಸಿದ್ದು ಹೆಚ್ಚಾಗಿ ಬ್ರಹ್ಮಾನಂದರೆ, ಶೇಷಾಚಲೇಶ್ವರರನ್ನು ಕಟ್ಟಿಸಿದ್ದೂ ಬ್ರಹ್ಮಾನಂದರೆ, ಶೇಷಾಚಲೇಶ್ವರನ ಶಿಲೆಯ ಗರ್ಭಗುಡಿ ಮಾತ್ರ ನಿರ್ಮಾಣವಾಗಿತ್ತು ಶಿಖರ (ಗೋಪುರ) ಆಗಿರಲಿಲ್ಲ. ಅದನ್ನು ನಿರ್ಮಿಸಲು ಬ್ರಹ್ಮಾನಂದರು ಯೋಜಿಸಿದರು. ಆಗ ಮತ್ತೆ ಎನ್.ಸಿ.ದೇಸಾಯಿಯವರಿಗೆ ಕರೆ ಬಂತು ಶೇಷಾಚಲೇಶ್ವರನ ಮಂದಿರಕ್ಕೆ ಗೋಪುರ ಕಟ್ಟಿಸಬೇಕೆಂದು ವಿಚಾರಿಸಿದ್ದೇವೆ. ಅದಕ್ಕೊಂದು ನಕ್ಷೆ ಬೇಕಲ್ಲ? ಎಂದು ಹೇಳಿದರು. "ಈ ಸಲ ಮಾತ್ರ ಎನ್.ಸಿ.ದೇಸಾಯಿಯವರು ಕೂಡಲೇ ಒಪ್ಪಲಿಲ್ಲ ಈ ಕೆಲಸ ಇಂಜಿನಿಯರಿಂದ ಆಗುವದೇ ಸೂಕ್ತ" ಎಂದು ಅವರು ಸೂಚಿಸಿದರು. ಸರಿ ನೀವು ಹೇಳುವುದು ನಿಜ. ಆದರೆ ನೀವು ಶಿಖರದ ನಕ್ಷೆಯನ್ನಂತು ತಯಾರಿಸಿರಿ ತಾಂತ್ರಿಕ ಸಲಹೆಗಾಗಿ ಇಂಜಿನಿಯರರನ್ನು ಕಾಣೋಣ ಎಂದು ಹೇಳಿದರು. ಅದಕ್ಕೆ ಒಪ್ಪಿದರು. ಆ ಸಮಯಕ್ಕೆ ಅವರ ಬುದ್ಧಿಗೆ ನಿಲುಕಿದಂತೆ ನಕ್ಷೆಯ ಕರಡುಗಳನ್ನು ಸಿದ್ದ ಪಡಿಸಿದರು. ಬ್ರಹ್ಮಾನಂದರು ಇಂಜಿನಿಯರಿಗೆ ನಕ್ಷೆಯ ಬಗ್ಗೆ ಹೇಳುವದು ಬೇಡವೆಂದಿದ್ದರಂತೆ. ಭಕ್ತರಾಗಿದ್ದ ಕೆಲ ಇಂಜಿನಿಯರುಗಳಿಂದ ನಕ್ಷೆಮಾಡಿಸಿದ್ದರು ಎನ್.ಸಿ.ದೇಸಾಯಿಯವರು ಚಿತ್ರಿಸಿದ ಚಿತ್ರಗಳು ಸಿದ್ದವಾದ ಮೇಲೆ ಆನಂದವನದಲ್ಲಿಯೇ ಇದ್ದ ಕೆಲ

ಹಿರಿಯರನ್ನು ಕರೆದು ಇಂಜನಿಯರು ತಯಾರಿಸಿದ ನಕ್ಷೆ ಹಾಗು ಎನ್.ಸಿ.ದೇಸಾಯಿಯವರು ಗೀಚಿದ ಕರಡು ಚಿತ್ರಗಳನ್ನೂ ಎಲ್ಲರ ಸಮಕ್ಷಮ ತೋರಿಸಿದರು ಈ ಸಂದರ್ಭದಲ್ಲಿ ಒಪ್ಪಿಗೆಯಾದ ನಕ್ಷೆಯನ್ನು ಕಟ್ಟಡ ರೂಪದಲ್ಲಿ ನಿರ್ಮಿಸಬೇಕಾದ ಗೌಂಡಿ ಮಹದೇವಪ್ಪ ಕೂಡ ಇದ್ದರು. ಎನ್.ಸಿ.ದೇಸಾಯಿಯವರಿಗೆ ಸಾದಾ ಡ್ರಾಯಿಂಗ್ ಹಾಳೆಯ ಮೇಲೆ ಇಂಡಿಯನ್ ಇಂಕನಿಂದ ಕರಡುಗಳನ್ನು ತಯಾರಿಸಿದ್ದರು. ಆಶ್ಚರ್ಯ ಎಂದರೆ ಅವರು ನಿರ್ಮಿಸಿದ ನಕ್ಷೆಗಳಲ್ಲಿ ಒಂದನ್ನು ಕೂಡಿದ ಜನ ಆರಿಸಿದರು "ನನ್ನ ಕಣ್ಣು ಮನಸ್ಸನ್ನು ನಾನೇ ನಂಬದವನಾದೆ" ಆ ಅಲ್ಪ ಸಮಯದಲ್ಲಿ ಅವರು ಆ ನಕ್ಷೆಯ ಕಲ್ಪನ ಹೇಗೆ ಹೊಳೆಯಿತು ಎಂಬುವದು ಅವರಿಗೆ ತಿಳಿಯಲಿಲ್ಲವಂತೆ. ಎಂಟು ಕಮಾನಿನ ಇಬ್ಬದಿಗೂ ಸೊಂಡೆ ಎತ್ತರಿಸಿದ ಆನೆಗಳ ಮೇಲೆ ಅರಳಿದ ಕಮಲ ಅದರ ಮೇಲೆ ಕೊನೆಯ ಚಿಕ್ಕ ಗೋಪುರ ಅದರ ಮೇಲೆ ಕಳಸ ನಾನಾಗ ಬೇಸಾಯದ ಕೆಲಸದಲ್ಲಿ ಸಹಾಯ ಮಾಡುತ್ತಿದ್ದೆನೇನೋ ನಿಜ ಆದರೆ ನಿರುದ್ಯೋಗಿ ಮುದ್ರೆಯನ್ನು ಹೊತ್ತ ತರುಣ ಆವಾಗ ಬ್ರಹ್ಮಾನಂದರು ಎಂದರು ಧಣೇರ ಹೇಗೂ ತಾವೀಗ ಯಾವ ಕೆಲಸದಲ್ಲೂ ಇಲ್ಲ ಅದು ಒಂದು ರೀತಿಯಿಂದ ಸ್ವಾಮಿಗೆ ಅನುಕೂಲ ಇನ್ನೂ ನಿಮಗೆ ಸ್ವಾಮಿಯ ಸೇವೆ ಮಾಡುವ ಭಾಗ್ಯ ಗೌಂಡಿ ಕೆಲಸದ ಜವಾಬ್ದಾರಿಯನ್ನಂತು ಮಹದೇವಪ್ಪ ಹೊತ್ತಿದ್ದಾನೆ. ಅವನೇ ತನಗೆ ಬೇಕಾದ ಸಹಾಯಕ ಗೌಂಡಿಗಳನ್ನು ಆರಿಸಿಕೊಳ್ಳುತ್ತಾನೆ. ಹಾವೇರಿಯ ಬುಡನ್ ಸಾಬ ಇಟ್ಟಿಗೆ ಸುಟ್ಟುಕೊಡುವುದಾಗಿ ಹೇಳಿದ್ದಾನೆ. ಉಳಿದ ಸಾರ್ವತ್ರಿಕ ಕಾರ್ಯದ ನಿರ್ವಹಣೆಯನ್ನು ನಗರ ಶ್ರೀ ಭೀಮಾಚಾರ್ಯರು ವಹಿಸಿಕೊಂಡಿದ್ದಾರೆ. ನಿಷ್ಟ ಕಾರ್ಯದ ಪ್ರಗತಿಯನ್ನು ನೋಡುತ್ತಿದ್ದು ಏನಾದರು ತಾಂತ್ರಿಕ ತೊಂದರೆಗಳು ಬಂದರೆ ಅವನ್ನು ಬಗೆ ಹರಿಸುವ ಸೇವೆ ಮಾಡಿದರೆ, ಸ್ವಾಮಿ ಸಂತುಷ್ಟನಾಗುತ್ತಾನೆ ಎಂದ ಬ್ರಹ್ಮಾನಂದರು ಆಶೀರ್ವದಿಸಿದರು. ಸ್ವಾಮಿಯ ಸೇವೆ ಅಂದರೆ ಸಾಕು ಸೇವೆ ಎಂಥದೇ ಇರಲಿ ಎನ್.ಸಿ.ದೇಸಾಯಿಯನರ ರಟ್ಟೆಗಳಿಗೆ ಬಲದ ಶಕ್ತಿ ಇಮ್ಮಡಿಸುತ್ತಿತ್ತು. ಈ ಸೇವೆಯಂತೂ ಐಚ್ಛಿಕವಾದುದು ನೈಸರ್ಗಿಕವಾಗಿಯೇ ಶಕ್ತಿ ಹಾಗೂ ಮಾನಸಿಕ ಬಲ ನೂರರಷ್ಟು ಹೆಚ್ಚಿತು. ಒಂದು ಒಳ್ಳೆಯ ಮುಹೂರ್ತ ನೋಡಿ ಗೋಪುರದ ಕಟ್ಟಡ ಪ್ರಾರಂಭಗೊಂಡಿತು.

ಕಟ್ಟಡಕ್ಕೆ ಬೇಕಾಗುವ ಸಾಮಗ್ರಿ ಆಳುಕಾಳು, ಅಂಥ ಏನೇ ಕೆಲಸವಿದ್ದರೂ ಭೀಮಾಚಾರ್ಯರ ಹೊಣೆ ಆಳುಗಳಿಗೆ ಗೌಂಡಿಗಳಿಗೆ ಮತ್ತಿತರ ಸಾಮಗ್ರಿಗಳಿಗೆ ಹಣ ನೀಡಿ ಲೆಕ್ಕವಿಡುವ ಕಾರ್ಯವೂ ಅವರದೇ ಎನ್.ಸಿ.ದೇಸಾಯಿಯವರದು ಸೇವಾ ದೃಷ್ಟಿಯಿಂದ ನಡೆಯುವ ಕೆಲಸ ಮಾತ್ರ. ಉದಾಹರಣೆಗೆ ಕಟ್ಟಡಕ್ಕೆ ಉಪಯೋಗಿಸುವ ಇಟ್ಟಿಗೆಗಳು ೨೪ ಘಂಟೆಯಾದರು ನೀರಲ್ಲಿ ನೆನೆಯಬೇಕೆಂಬುದನ್ನು ಕೇಳಿದ್ದ ಎನ್.ಸಿ.ದೇಸಾಯಿಯವರು ಆ ಸೇವೆಯು ಶ್ರದ್ಧೆಯಿಂದಲೇ ನೆರವೇರಿಸುತ್ತಿದ್ದರು. ಜೊತೆಗೆ ಕಟ್ಟಿ ನಿರ್ಮಾಣವಾಗುವ ಗೋಪುರದ ಅಂದ ಕೆಡದಂತೆ ನೋಡಿಕೊಳ್ಳುವದೂ ಅವರ ನೈತಿಕ ಜವಾಬ್ದಾರಿಯ ಹೊಣೆ ಇಂಥ ಜಾಗರೂಕತೆಯಲ್ಲೂ ಕೈತಿತಪ್ಪಿ ತಪ್ಪುನಡೆದು ಹೋಗಿತ್ತು ಅದು ನಡೆದದ್ದು ಅವರ ಗೈರು ಹಾಜರಿಯಲ್ಲಿ ಶಾಮರಾಯರಿಗೆ ಹಾನಗಲ್ಲಿಗೆ ಕೊಟ್ಟ ಅವರ ತಂಗಿ ಬಾಣಂತಿಯಾಗಿದ್ದಳು. ಗಂಡು ಮಗು

ಆದರೆ ಆ ಹಳೆಯ ಮನೆಯಲ್ಲಿ ಮಲಗಿದಲ್ಲಿಯೆ ಆ ಹಸಿ ಗೂಸು ಪ್ರಾಣ ಬಿಟ್ಟಿತು. ಬಾಣಂತನದ ವೇಳೆಗೆ ಎನ್.ಸಿ.ದೇಸಾಯಿಯವರ ತಾಯಿ ಮೊದಲೇ ಹೋಗಿದ್ದರು. ಈ ದುರ್ಘಟನೆ ನಡೆದ ಮೇಲೆ ಅವರ ತಾಯಿಗೆ ಸಹಾಯಕನಾಗಿ ಹೋದರು ಅಲ್ಲಿ ತಿಂಗಳೊಪ್ಪತ್ತು ಇರುವ ಪ್ರಸಂಗ ಬಂತು, ಗೋಪುರದ ಕೆಲಸ ಮುಕ್ತಾಯದ ಹಂತದದಲ್ಲಿತ್ತು. ಅದನ್ನು ನೋಡುತ್ತಲೆ "ನನ್ನ ತಲೆ ಬಂದ್" ಎಂದಿತು. ಎನ್.ಸಿ.ದೇಸಾಯಿಯವರ ನಕ್ಷೆಯಲ್ಲಿದ್ದ ಸರಿಯಾದ ಆಕಾರವನ್ನು ಆ ಗುಂಬಜದ ಮುಕ್ತಾಯದ ಹಂತದಲ್ಲಿ ತಲುಪಿಬಿಟ್ಟಿದ್ದ, ಆ ವ್ಯತ್ಯಾಸವನ್ನು ನೋಡಿ ಅವರಿಗೆ ತಡೆದುಕೊಳ್ಳುವುದಾಗಲಿಲ್ಲ. ಮಹಾದೇವಪ್ಪನನ್ನು ಕರೆದರು ಆಗಿದ್ದ ತಪ್ಪನ್ನು ವಿವರಿಸಿ ಹೇಳಿದರು ಆ ಸೂಚನೆಗೆ ಅವನು ಒಪ್ಪಲಾರದವನಾದ ಆ ತಪ್ಪನ್ನು ಅವನಿಗ ಬಿಂಬಿಸ ಬೇಕಾದರೆ ಸಾಕು ಬೇಕಾಯಿತು. ಮತ್ತೆ ಅದೇ ಆಕಾರದಲ್ಲಿ ಕಾಗದದ ಮೇಲೆ ಚಿತ್ರಿಸಿ ಕತ್ತರಿಸಿ ತೋರಿಸಿ ಅವನಿಗೆ ತಪ್ಪಿನ ಅರಿವಾಗುವಂತೆ ಹೇಳಿದರು. ಆಗ ಅವರಿಗೆ ಅರ್ಥವಾಯಿತು.

ಆದರೆ ಭೀಮಾಚಾರ್ಯ ಅದಕ್ಕೆ ಒಪ್ಪಲು ಸಿದ್ದರಿಲ್ಲ ಏಕೆಂದರೆ ಅದಕ್ಕೆ ಉಪಯೋಗಿಸ ಬೇಕಾದ ಸಲಕರಣೆಗಳನ್ನೆಲ್ಲ ಉಪಯೋಗಿಸಿ ಆಗಿದೆ, ಗೌಂಡಿಗಳು ಅದರ ಕೆಲಸ ಮಾಡಿದ್ದು. ಅವರ ಕೂಲಿಯನ್ನು ಕೊಟ್ಟಾಗಿದೆ. ಈ ರೀತಿಯಾಗ ಅದನ್ನು ತಿದ್ದಲು ಹೋದರೆ ಈ ಆರ್ಥಿಕ ಹಾನಿಯಾಗುತ್ತದೆ ಎಂದೂ ಭೀಮಾಚಾರ್ಯರರಾದ ಅದು ಬದಲಿಯಾಗಲೇ ಬೇಕೆಂದು ಎನ್.ಸಿ.ದೇಸಾಯಿಯವರ ಹಟ. ಈ ರೀತಿ ತಿಕ್ಕಾಟ ನಡೆಯಿತು. ಇದರ ನಿರ್ಣಯ ಮಾಡಬೇಕಾದ ಬ್ರಹ್ಮಾನಂದರು ಊರಲ್ಲಿಲ್ಲ.

"ಏನೇ ಆಗಲಿ ಆಗಿರುವ ತಪ್ಪನ್ನು ತಿದ್ದಲೇ ಬೇಕು ಆರ್ಥಿಕ ಹಾನಿಯ ಪ್ರಶ್ನೆ ಬಂದರೆ ಗುರುಗಳಿಗೆ ನಾನು ಹೇಳುತ್ತೇನೆಂದು ವಾದಿಸಿ ಕೆಲ ಹಿರಿಯರ ಅಪ್ರಿಯತೆಗೆ ಪಾತ್ರನಾದ ನಂತರ ನಾನು ಎದುರಿಗೆ ನಿಂತೆ. ಆ ತಿದ್ದುಪಡಿಯನ್ನು ಮಾಡಿಸಿದೆ. ಅದು ಆಗದಿದ್ದರೆ ಕಲೆಯ ವಿಷಯ ಅಲ್ಪ ಜ್ಞಾನವಿದ್ದರೂ ಕೂಡ ನೋಡಿ ನಗುವಂತಾಗುತ್ತಿತ್ತು" ಅದು ರಿಪೇರಿಯಾದ ಮೇಲೆ ಅಕ್ಕಪಕ್ಕ ಕಳಿಸಿದ ನಕ್ಷೆಯನ್ನು ಬ್ರಹ್ಮಾನಂದರ ಆಜ್ಞೆಯ ಮೇಲೆ ಕಾಗದ ಕತ್ತರಿಸಿ ಮಾಡಿ ಕಳಸವನ್ನು ತಾಮ್ರದ ತಗಡಿನಿಂದ ಸಿದ್ದಪಡಿಸಿ ೫ ತೊಲಿ ಚಿನ್ನದ ಗಿಲೀಟು ಮಾಡಲಾಯಿತು. ಈ ಜವಾಬ್ದಾರಿಯನ್ನು ಇನ್ನೊಬ್ಬ ಹಿರಿಯ ಕಲಾವಿದರಾದ ಬೆಂಗಳೂರಿನ ಅ.ನ. ಸುಬ್ಬರಾಯರಿಗೆ ಒಪ್ಪಿಸಿದರು. ಅದು ಸಿದ್ದವಾದ ಮೇಲೆ ಸುಬ್ಬರಾಯರೆ ಸ್ವತಃ ತೆಗೆದುಕೊಂಡು ಬಂದರು. ಅವರು ಮತ್ತು ಎನ್.ಸಿ.ದೇಸಾಯಿಯವರು ಸೇರಿಯೇ ಗೋಪುರದ ಮೇಲೆ ಹತ್ತಿ ಅದಕ್ಕೆ ಎಷ್ಟು ಇಂಚಿನ ಪೈಪು ಹಾಗು ಕಟ್ಟಡದಲ್ಲಿ ಎಷ್ಟು ಒಳಗೆ ಸೇರಬೇಕೆಂಬುದನ್ನು ನಿರ್ಧರಿಸಿದರು ಕೆಲದಿನಗಳ ನಂತರ ಧಾರ್ಮಿಕವಾಗಿ ಕಳಸಾರೋಹಣ ನೆರವೇರಿತು.

ಎನ್.ಸಿ. ದೇಸಾಯಿಯವರ ಕಲಾಕೃತಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವರೊಳಗೊಂದು ಕಲಾತ್ಮಕ ಪ್ರತಿಭೆಯೊಂದು ಸೃಜನಶೀಲವಾಗಿ ಆಲೋಚಿಸುವುದು ಕಂಡುಬರುತ್ತದೆ. ಸಾಂಪ್ರದಾಯಿಕ ಚಿತ್ರಗಳನ್ನು ರಚಿಸುವ ಮೂಲಕ ಆಧ್ಯಾತ್ಮಿಕ ಉನ್ನತಿಯ ಬಹು ಆಯಾಮಗಳನ್ನು ಗುರುತಿಸಲು

ಪ್ರಯತ್ನಿಸಿದ್ದಾರೆ. ಪ್ರಕೃತಿಯ ವೈಚಿತ್ರ್ಯದ ಬಹು ಸಾಧ್ಯತೆಗಳನ್ನು ತಮ್ಮ ಕಲಾಕೃತಿಗಳಲ್ಲಿ ಸೆರೆಹಿಡಿಯಲು ಪ್ರಯತ್ನಿಸಿದ್ದಾರೆ. ಹೀಗಾಗಿ ಬಣ್ಣದ ಬಳಕೆ ಸಂಯೋಜನೆಯಲ್ಲಿನ ದೃಢತೆ, ವಿಷಯದ ಆಯ್ಕೆಯಲ್ಲಿನ ವಿದ್ವತ್ತು ಕಂಡುಬರುತ್ತದೆ. ಜೀವನ ನಿರ್ವಹಣೆಯ ಮಾಧ್ಯಮವಾಗಿ ಕಲೆಯನ್ನು ಆರಾಧಿಸಿದರೂ ಇದು ಬದುಕಿನ ಅನಿವಾರ್ಯವಾಗಿತ್ತು. ಇದರಾಚೆಯೂ ಅವರೊಳಗೊಂದು ಕಲಾತ್ಮಕ ದೃಷ್ಟಿಯ ಚೇತನ ಸದಾ ಹೊಳೆಯುತ್ತಿತ್ತು.

## ಕಾವ್ಯ ಕುರಿತು ವರ್ಣಚಿತ್ರಗಳು



ಹಾರಗುದರೀ ಬೆನ್ನ ಏರಿ/
ಸ್ವಾರರಾಗಿ ಕೂತು ಹಾಂಗs
ದೂರ ದೂರಾ ಹೋಗೋಣಾಂತs/
ಯಾರಿಗೂ ಹೇಳೋಣು ಬ್ಯಾಡಾ.



ಹಣ್ಣು ಹೂವು ತುಂಬಿದಂಥ
ನಿನ್ನ ತೋಟ ಸೇರಿ ಒಂದs
ತನ್ನೋಣಾಂತ ಅದರ ಹೆಸರು
ಯಾರಿಗೂ ಹೇಳೋಣು ಬ್ಯಾಡಾ.



ಹಾವಿನಾ ಮರಿಯಾಗಿ ಅಲ್ಲಿ
ನಾವುನೂ ಹೆಡೆಯಾಡಿಸೋಣು
ಹೂವೆ ಹೂವು ಹಸಿರೆ ಹಸಿರು/
ಯಾರಿಗೂ ಹೇಳೋಣು ಬ್ಯಾಡಾ.



ಮಲ್ಲಿಗೀ ಮಂಟಪ್ಪದಾಗ
ಗಲ್ಲ ಗಲ್ಲ ಹಚ್ಚಿ ಕೂತು
ಮೆಲ್ಲ ದನಿಲೆ ಹಾಡೋಣಂತೆ/
ಯಾರಿಗೂ ಹೇಳೋಣು ಬ್ಯಾಡಾ.

# ಕಾವ್ಯ ಕುರಿತು ವರ್ಣಚಿತ್ರಗಳು



ಇಮ್ಮನವಾದಳು, ಚಲಿಸಳು, ನಗಳು, ಇಲ್ಲ ಕೆಂಡಕಾರಿ।
ನಲ್ಲ ಬರೆದ ಚಿತ್ರವ ಕಂಡು ಚಿತ್ರದಂತಿಹಳು ನಾರಿ॥
-(ಕಾಳಿದಾಸ)



ಪ್ರೇಮದಿಂದ ನೀ ಕಳುಹಿದ ಬೀಸಣಿಕೆ ಬೀಸಿದ ಗಾಳಿ!
ಕಳೆಯಿತೆನೋ ವಿರಹತಾಪಬ, ಆದರೆ ಮೈಗೆ ಬೆವರ ದಾಳಿ ॥
-(ಕಾಳಿದಾಸ)



ದ. ರಾ. ಬೇಂದ್ರೆಯವರ ಕಾವ್ಯದಲ್ಲಿ ಕಾಳಿದಾಸ



ಕವಿ ಜಯದೇವ ಅವರ ಕ್ಯಾವ್ಯಕ್ಕೆ ಕಲಾವಿದ
ಎನ್.ಸಿ.ದೇಸಾಯಿಯವರು ಕಲಾಕೃತಿ [illegible]

# ಸಂಪ್ರದಾಯಕ ಶೈಲಿಯ ವರ್ಣಚಿತ್ರಗಳು



ಬಸವಣ್ಣ



ಗಣೇಶ



ಸರಸ್ವತಿ



ಶುಭರಾಯರ ಪ್ರೇರಣೆಯಿಂದ ರಚನೆಗೊಂಡ ಕಲಾಕೃತಿ

## ರೂಪ ಭಾವ ಚಿತ್ರಗಳು



ಗಳಗನಾಥರು



ಡಿ.ವಿ.ಜಿ



ದ.ರಾ ಬೇಂದ್ರೆ



ಸ್ವಾಮಿ ವಿವೇಕಾನಂದ

# ವ್ಯಕ್ತಿ ಮತ್ತು ಐತಿಹಾಸಿಕ, ಧಾರ್ಮಿಕ ಮಹಾ ಪುರುಷರ ವರ್ಣ ಚಿತ್ರಗಳು



ಭಗವಾನ ನಾರಾಯಣಸ್ವಾಮಿ



ಶಂಕರಾಚಾರ್ಯರು



ಸ್ವಾಮಿ ವಿವೇಕಾನಂದ



ಸ್ವಾಮಿ ವಿವೇಕಾನಂದ

# ವ್ಯಕ್ತಿ ಮತ್ತು ಐತಿಹಾಸಿಕ, ಧಾರ್ಮಿಕ ಮಹಾ ಪುರುಷರ ವರ್ಣ ಚಿತ್ರಗಳು



ವ್ಯಕ್ತಿ ಚಿತ್ರ



ಆದಿಲ್‌ಶಾಹಿ (ಬಿಜಾಪುರ) I



ಆದಿಲ್‌ಶಾಹಿ (ಬಿಜಾಪುರ) II



ಆದಿಲ್‌ಶಾಹಿ (ಬಿಜಾಪುರ) III

# ವಿಶ್ವವ್ಯಾಪಿ ಗಣೇಶನ ಚಿತ್ರಗಳು



ಬಾರಾ ಗಣೇಶ



ರಕ್ಷಕ ದೇವತೆಯಾದ ಗಣೇಶ ವಿಯಟ್‌ನಾಮ್



ಜಾವಾದ ಗಣೇಶ



ಜಾವಾದ ಪ್ರಾಚೀನ ಗಣೇಶ

# ವಿಶ್ವವ್ಯಾಪಿ ಗಣೇಶನ ಚಿತ್ರಗಳು



ಕಾಂಬೋಡಿಯಾ ಗಣೇಶ



ನೇಪಾಳ ಶಕ್ತಿ ಸಹಿತ ಹೇರಂಬ ಗಣೇಶ



ಕಾಂಗಿ–ತೆನ್–ಜಪಾನಿನ ಗಣೇಶ



ಆಫಘಾನಿಸ್ತಾನ ನಾಗಬಂಧ ಗಣೇಶ


ಬನಶಂಕರಿ


ಶೃಂಗೇರಿ


ನಿಸರ್ಗದ ಚಿತ್ರ

# ನಿಸರ್ಗ ವರ್ಣ ಚಿತ್ರಗಳು

ಬಾದಾಮಿ



ಬಿಜಾಪುರ



ಬಿಜಾಪುರ

## ಮುಖಪುಟ ವಿನ್ಯಾಸ ಮತ್ತು ಕ್ಯಾಲೆಂಡರ್ ವಿನ್ಯಾಸಗಳು











## ಮುಖಪುಟ ವಿನ್ಯಾಸ ಮತ್ತು ಕ್ಯಾಲೆಂಡರ್ ವಿನ್ಯಾಸಗಳು











# ಸಂಯೋಜನ ವರ್ಣ ಚಿತ್ರಗಳು



ಕೊಡ ಹೊತ್ತ ಮಹಿಳೆ



ಮಣಿ ಪೋಣಿಸುತ್ತಿರುವ ಹುಡುಗಿ



ಮಾಲೆ ಕಟ್ಟುತ್ತಿರುವ ಮಹಿಳೆ



ಶಕುಂತಲೆ

# ಸಂಯೋಜನ ವರ್ಣ ಚಿತ್ರಗಳು



ಬಾಲೆ



ಬೆರಗಿನಿಂದ ನಿರೀಕ್ಷಿಸುತ್ತಿರುವ ಬಾಲೆ



ಪ್ರಣಯದಲ್ಲಿರುವ ಪ್ರೇಮಿಗಳು



ಮೇಳದವರು

## ಕ್ಯಾಮರಾ ಕಣ್ಣಿನಿಂದ ಮೂಡಿದ ಛಾಯಾ ಚಿತ್ರಗಳು



ಕೋಲೆಬಸವ



ನಾಯಿ ಮತ್ತು ಮಗು

# ಕ್ಯಾಮರಾ ಕಣ್ಣಿನಿಂದ ಮೂಡಿದ ಛಾಯಾ ಚಿತ್ರಗಳು



ಕಸೂತಿ ಛಾಯಾ ಚಿತ್ರ I



ಕಸೂತಿ ಛಾಯಾ ಚಿತ್ರ II



ಹಣ್ಣು ಮಾರುವವಳು

## ಇತರೆ ವರ್ಣ ಚಿತ್ರಗಳು



ಮಗು – I



ಮಗುಖ – I



ಕೇಶ ಶೃಂಗಾರ – II

ಎನ್. ಸಿ. ದೇಸಾಯಿಯವರ

# ಇತರೆ ವರ್ಣ ಚಿತ್ರಗಳು



ನತ್ತು – I



ನತ್ತು – II



ನತ್ತು – III

## ಅಧ್ಯಾಯ ನಾಲ್ಕು

## ಎನ್.ಸಿ.ದೇಸಾಯಿಯವರ ಕಲಾ ಸಾಹಿತ್ಯ

ಎನ್.ಸಿ.ದೇಸಾಯಿಯವರ ಕಲಾ ಶಿಕ್ಷಣ ಮುಗಿಯದಿದ್ದರೂ. ಆನಂದವನದ ಹತ್ತಿರದ ವಾಸ್ತವ್ಯ ಇವರಿಗೆ ಇನ್ನೊಂದು ರೀತಿಯಲ್ಲಿ ಲಾಭದಾಯಕವಾಯಿತು ಅಲ್ಲಿದ್ದ "ಸದ್ಬೋಧ ಚಂದ್ರಿಕೆ" ಕಾರ್ಯಾಲಯ ಹಾಗು ಅಲ್ಲಿಗೆ ಚಂದ್ರಿಕೆಗೆ ವಿನಿಮಯವಾಗಿ ಬರುತ್ತಿದ್ದ ಇತರೆ ಪತ್ರಿಕೆಗಳು ಇವರೆಗೆ ಓದಲು ಲಭ್ಯವಾಗುತ್ತಿದ್ದುದು ಒಂದು ವಿಶೇಷ ಸೌಕರ್ಯವಾಗಿ ಪರಿಣಮಿಸಿತು. ಈ ಸಂದರ್ಭ ಪರೋಕ್ಷವಾಗಿ ಸಾಹಿತ್ಯದ ಅಭಿರುಚಿಯನ್ನು ಬೆಳೆಸಿತು.

ಪತ್ರಿಕೆಗಳಲ್ಲದೇ ಅಲ್ಲಿದ್ದ ಗಳಗನಾಥರು ಮತ್ತಿತರರ ಸಾಹಿತಿಗಳ ಕಾದಂಬರಿಗಳನ್ನು ಓದುವ ಭಾಗ್ಯ ಇವರಿಗೆ ಒದಗಿಬಂತು. ಆಗ ಇವರಲ್ಲಿ ಉಂಟಾಗಿರುವ ಸಾಹಿತ್ಯಿಕ ಪ್ರವೃತ್ತಿಗೆ ಆ ಸಂದರ್ಭವೇ ಮೂಲ ಕಾರಣವಾಯಿತು. ಈ ರೀತಿಯಾಗಿ ಎನ್.ಸಿ.ದೇಸಾಯಿಯವರು ಶಾಲೆಗೆ ಹೋಗದಿದ್ದರೂ ಶಾಲಾ ಶಿಕ್ಷಣ ಸಾಹಿತ್ಯಿಕ ಪರಿಚಯಯ ಅವರಲ್ಲಿ ಅವರಿಗರಿವಿಲ್ಲದೇ ಬೆಳೆದುಕೊಡು ಬಂದಿತು.

ವೇಳೆಯ ಅನುಕೂಲವಿದ್ದಾಗ ಆನಂದವನದ ಕಾರ್ಯಾಲಯದಲ್ಲಿ ಕುಳಿತು, ಸದ್ಬೋಧ ಚಂದ್ರಿಕೆ ಪತ್ರಿಕೆಗಳನ್ನು ತಿರುವಿ ಹಾಕುವುದು. ಮನಸ್ಸಿಗೆ ಇಷ್ಟವಾದ ಲೇಖನಗಳನ್ನು ಓದುವುದು. ಅಲ್ಲಿ ದೊರೆಯುತ್ತಿದ್ದ ಗಳಗನಾಥರ ಐತಿಹಾಸಿಕ ಕಾದಂಬರಿಗಳನ್ನು ಓದಿ ಎನ್.ಸಿ.ದೇಸಾಯಿಯವರಲ್ಲಿ ರಾಷ್ಟ್ರಪ್ರೇಮ ಚಿಗುರಲು ಕಾರಣವಾಯಿತು.

ಗಳಗನಾಥರ ಕಾದಂಬರಿಗಳಿಂದಲೂ ಅವು ನೇರವಾಗಿ ದೇಶಭಕ್ತಿಯ ಕುರಿತು ಹೇಳಿರುವ ವಿಚಾರಗಳು ತರುಣದಲ್ಲಿಯೇ ಎನ್.ಸಿ.ದೇಸಾಯಿಯವರ ಮನಸ್ಸಿನ ಮೇಲೆ ಪರೋಕ್ಷವಾಗಿ ದೇಶಭಕ್ತಿಯ ಪ್ರೇಮ ಮನಸ್ಸಿನಲ್ಲಿ ಬಿತ್ತಿದ್ದವು ಹೀಗೆ ಕಾದಂಬರಿಗಳಿಂದ ದೇಶಪ್ರೇಮ ಪ್ರಬುದ್ಧ ಕರ್ನಾಟಕದಂತಹ ಸಾಹಿತ್ಯಾಭಿರುಚಿಯನ್ನು ಇವರಲ್ಲಿ ಭಿತ್ತರಿಸಿತು. ಕೃಷ್ಣಮೂರ್ತಿ ಪುರಾಣಿಕ ಸೈರಂಧ್ರಿಯನ್ನು ಆನಂದವನದಲ್ಲಿ ಓದಿದ್ದರಂತೆ. ಇದೇ ರೀತಿ ಇಂಥ ಎಷ್ಟೋ ಸಾಹಿತ್ಯಕ ಕೃತಿಗಳು ಇವರ ಕಣ್ಣಿಗೆ ಕಾಣುತ್ತಿದ್ದಂತೆ ಮನಸ್ಸಿಗೆ ಇಷ್ಟವಾದ ಕೃತಿಗಳನ್ನು ಓದುವ ತನಕ ಅವರಿಗ ಸಮಾಧಾನವಾಗುತ್ತಿರಲಿಲ್ಲವಂತೆ.

ಇನ್ನೊಂದು ಮಹತ್ವದ ಕೃತಿ ವೀರ ಸಾರ್ವಕರ್ ಅವರ ಅಮೂಲ್ಯ ಕೃತಿ "ಕರಿನೀರು" ಪುಸ್ತಕವನ್ನು ಓದಿದ್ದು ಅಲ್ಲಿನಿಯೇ ಮರಾಠಿ ಕಾಳಾಪಾಣಿ ಎಂಬುದು ಕನ್ನಡ ಅನುವಾದವೇ. ಆ ಗ್ರಂಥ ಶ್ರೀ ಶೇಷಾಚಲ ಮುದ್ರಣಾಲಯದ ಮಾಲೀಕರಾದ ಭೀಪಕಾಲೇ ಅವರೇ ಅದನ್ನು ಅನುವಾದಿಸಿ ಅವರಲ್ಲಿಯೇ ಅಚ್ಚುಹಾಕಿದ್ದರು. ಎನ್.ಸಿ.ದೇಸಾಯಿಯವರು ಅವಿಷ್ಟು ಚಿತ್ರ ಬರೆಯುತ್ತಾರೆ ಎಂದು ತಿಳಿದು ಕಾಳೇಯವರು 'ಕರಿನೀರು' ಪುಸ್ತಕಕ್ಕೆ ಒಂದಿಷ್ಟು ಚಿತ್ರಗಳನ್ನು ಇವರಿಂದ ಬೆರಸಿದರಂತೆ.

ಹುಬ್ಬಳ್ಳಿ ಬಿಟ್ಟು ಬಂದ ಮೇಲೆ ಆನಂದವನದ ಬಂಗಲೆಯಲ್ಲಿಯೇ ಇದ್ದರು. ಒಂದು ವರ್ಷಕ್ಕಿಂತಲೂ ಹೆಚ್ಚುಕಾಲ ಕಳೆಯಿತು. ೧೯೪೩ನೇ ಇಸ್ವಿ ಡಿಸೆಂಬರ್ ತಿಂಗಳಲ್ಲಿ ದ.ರಾ.ಬೇಂದ್ರೆಯವರ ಅಧ್ಯಕ್ಷತೆಯಲ್ಲಿ ಸಾಹಿತ್ಯ ಸಮ್ಮೇಳನ ನಡೆಯುತ್ತಿತ್ತು. ಆ ಸಮ್ಮೇಳನಕ್ಕೆ ಹೋಗಬೇಕೆಂದು ಮನಮಿಡಿಯತೊಡಗಿತು. ಡಿಸೆಂಬರ್ ತಿಂಗಳು ಹತ್ತಿರಕ್ಕೆ ಬರತೊಡಗಿತು. ಶಿವಮೊಗ್ಗದಲ್ಲಿ ಸಮ್ಮೇಳನದ ಅಧ್ಯಕ್ಷತೆ ವಹಿಸುವ ದ.ರಾ.ಬೇಂದ್ರೆಯವರ ಚಿತ್ರ ಕಣ್ಣೆದುರು ಸುಳಿಯ ತೊಡಗಿದವು. ಸಮ್ಮೇಳನಕ್ಕೆ ಹೋಗಬೇಕೆಂಬ ಉತ್ಕಟ ಇಚ್ಛೆ ಬಲವಾಗಿ ಕೊನೆಗೂ ಅವರ ಪ್ರಶ್ನೆಗೆ ಅಂದಾಜು ಲೆಕ್ಕ ಮಾಡಿಯೇ 'ಎಷ್ಟಿದೆ? ರಿಯಾಯಿತಿಯ ರೈಲು ಖರ್ಚು'. ಮೂರುದಿನಗಳ ಊಟ, ವಸತಿ, ಪ್ರತಿನಿಧಿ ಶುಲ್ಕ ಎಲ್ಲ ಸೇರಿ ಹತ್ತು ರೂಪಾಯಿ ಆಗುತ್ತದೆ ಎಂದು ಹೇಳಿದರಂತೆ ಅದಕ್ಕೆ ಆಗಲಿ ಎಂದು ಒಪ್ಪಿದರು. ಮರುದಿನ ಎನ್.ಸಿ.ದೇಸಾಯಿಯವರು ಶಿವಮೊಗ್ಗಕ್ಕೆ ಹೊರಟರು.

ಅದೇ ಅವರು ಸಂದರ್ಶಿಸಿದ ಪ್ರಥಮ ಸಮ್ಮೇಳನ. ಅಲ್ಲಿ ದ.ರಾ.ಬೇಂದ್ರೆಯವರ ಭಾಷಣ ಅವರೇ ನುಡಿದ ಗಂಗಾವತರಣ ಪದ್ಯ. ಉಳಿದಂತೆ ಗೋಷ್ಠಿಗಳು. ಆದರೆ ಅವುಗಳ ನೆನಪು ಉಳಿದಿಲ್ಲ! ಬೇಂದ್ರೆಯವರ ಮಾತು ಪದ್ಯ ಮಾತ್ರ ಮನದಲ್ಲಿ ಅಚ್ಚು ಹಾಕಿದಂತಿವೆ ಎಂಬ ವಿಷಯ 'ನೆನಪುಗಳು' ಎಂಬ ದಿನಚರಿಯಿಂದ ತಿಳಿಯುತ್ತದೆ.

ಈ ಸಮ್ಮೇಳನದ ಸ್ವಾಗತ ಸಮಿತಿಯ ಕಾರ್ಯದರ್ಶಿ ಶ್ರೀ ಎಸ್.ವಿ.ಕೃಷ್ಣಮೂರ್ತಿ ಎಂಬುವರಾಗಿದ್ದರು. ಶಿವಮೊಗ್ಗಕ್ಕೆ ಹೋಗಿ ಎರಡು ದಿನಗಳ ಸಮ್ಮೇಳನ ಕಲಾಪಗಳನ್ನು ನೋಡಿದನಂತರ. ಇವರಿಗೆ ಹೊಳೆಯಿತು, "ಜೋಗ ಜಲಪಾತ ಇಲ್ಲಿಂದ ಸಮೀಪವಿದೆ ಎಂದು, ಇನ್ನೊಂದು ಹತ್ತು ರೂಪಾಯಿಗಳನ್ನು ತಂದೆಯವರಿಂದ ಪಡೆದಿದ್ದರೆ, ಅದನ್ನು ನೋಡಲಿಕ್ಕಾಗುತ್ತಿತ್ತು" ಆದರೂ ಪ್ರಯತ್ನಿಸಿ ನೋಡೋಣ ಎಂದು ಟೆಲಿಗ್ರಾಮ್ ಕಳಿಸಿ ಇನ್ನೊಂದು ೧೫ ರೂ. ಕಳಿಸಿ ಎಂದು ಕೇಳಿಕೊಂಡಿದ್ದರು. ಎನ್.ಸಿ.ದೇಸಾಯಿಯವರು ಮರಳುವ ಸಮಯದವರೆಗೂ ಹಣ ತಲುಪಲಿಲ್ಲ ಹೊರಟು ಬಂದರು. ಅವರ ತಂದೆಯವರು ಹಣ ಕಳಿಸಿದ್ದರೆಂದು ನಂತರ ಮರಳಿ ಊರಿಗೆ ಬಂದ ಮೇಲೆ ಅವರಿಗೆ ತಿಳಿಯಿತು. ಜೋಗ ಜಲಪಾತ ನೋಡುವದು ಮಾತ್ರ ಆಗ ಕೈ ತಪ್ಪಿತಂತೆ.

ಎನ್.ಸಿ.ದೇಸಾಯಿಯವರಿಗೆ ಚಿಕ್ಕಂದಿನಿಂದಲೆ ಸಾಹಿತಿಗಳ ಜೊತೆ ಒಡನಾಟ, ಓದುವ ಅಭಿರುಚಿ ಇಟ್ಟುಕೊಡಿದ್ದರು. ಆದರೆ ತಾವು ಲೇಖಕನಾದದ್ದು ಆಕಸ್ಮಿಕವೆನ್ನುತ್ತಾರೆ.

ಎನ್.ಸಿ.ದೇಸಾಯಿಯವರ ಕಲಾಗುರು ದಂಡಾವತಿಮಠರ ನೂತನ ಕಲಾ ಮಂದಿರಕ್ಕೆ ೧೫ ತುಂಬಿದಾಗ ಇಂಗ್ಲೀಷ, ಮರಾಠಿ, ಪತ್ರಿಕೆಗಳಲ್ಲಿ ವಿವರವಾದ ಲೇಖನಗಳು ಬಂದವು ಆದರೆ ಈ ಕನ್ನಡಿಗ ಕಲಾ ಗುರುವಿನ ಬಗ್ಗೆ ಕನ್ನಡದಲ್ಲಿಯೂ ಬರಬೇಕೆಂದು ಹಟತೊಟ್ಟು ದೇಸಾಯಿ ಒಂದು ಲೇಖನ ಬರೆದರು. ಆದರೆ ತಮ್ಮ ಹೆಸರಿನಲ್ಲೇ ಕಳುಹಿಸಲು ಅಳುಕ 'ಕಲಾಪ್ರಿಯ' ಗುಪ್ತನಾಮದಲ್ಲಿ ಈ ಲೇಖನ ಬೆಂಗಳೂರಿನ ಜನಪ್ರಿಯ ಪತ್ರಿಕೆಯಲ್ಲಿ ಪ್ರಕಟವಾಯಿತು 'ದಂಡಾವತಿ ಮಠರಿಗೆ ಗುರುದಕ್ಷಿಣೆಯೆಂದು' ಬಂದ ಈ ಲೇಖನದೊಂದಿಗೆ ಲೇಖಕ ಎನ್.ಸಿ.ದೇಸಾಯಿಯವರು ಉದಯಿಸಿದರು. ಈ ರೀತಿಯಾಗಿ ಅನೇಕ ಹೆಸರುಗಳನ್ನು ಬಳಸಿ ನಾನಾ, ನಾರಾಯಣ ಮತ್ತು ಇತರ ಹೆಸರುಗಳಿಂದ ಲೇಖನಗಳನ್ನು ಬರೆದಿದ್ದಾರೆ.

ಒಟ್ಟಾರೆ 'ಕಲಾವಿದನ ಕಣ್ಣಿಗೆ ಈ ರೀತಿ ಬರಹಗಾರನ ಕನ್ನಡಕ ಏರಿತು' ಎಂದು ತಮ್ಮ ಜೀವನದ ಈ ಮಹತ್ವ ಪೂರ್ಣ ಬದಲಾವಣೆಯನ್ನು ದೇಸಾಯಿಯವರು ಹೇಳುತ್ತಿದ್ದರು. ಸ್ವತಃ ಚಿತ್ರಕಾರ ಮತ್ತು ಛಾಯಾಚಿತ್ರಕಾರನಾಗಿದ್ದು ಇನ್ನಷ್ಟು ಅನುಕೂಲವಾಯಿತು ಎಂದು ಹೇಳುತ್ತಿದ್ದರು. ಎನ್.ಸಿ.ದೇಸಾಯಿಯವರ ಆಕರ್ಷಕ ಸಚಿತ್ರ ಲೇಖನಗಳು ನಾಡಿನ ಪ್ರಮುಖ ಪತ್ರಿಕೆಗಳಲ್ಲೆಲ್ಲ ಪ್ರಕಟವಾಗಿವೆ.

ದೇಸಾಯಿಯವರು ಚಿತ್ರಗಾರರಾಗಿ, ಬರಹಗಾರರಾಗಿ, ಛಾಯಾಚಿತ್ರಕಾರರಾಗಿ, ತಮ್ಮ ಪ್ರತಿಭೆಯನ್ನು ಕೊನೆಯ ವೇಳೆಯವರಿಗೆ ಕಲಾ ಪ್ರದರ್ಶನಗಳ ಮತ್ತು ಲೇಖನಗಳ ಮೂಲಕ ವ್ಯಕ್ತಪಡಿಸುತ್ತಲೇ ಇದ್ದರು ಕನ್ನಡದಲ್ಲಿ ಪ್ರಥಮ ಸಲ ಹೆಬ್ಬಾರರು, ಆಲಮೇಲಕರ್, ಎಸ್.ಎಮ್.ಪಂಡಿತರು, ಎನ್.ಎಸ್.ಬೇಂದ್ರೆ, ಬಿ.ಪ್ರಭಾ ಹಾಗೂ ಅಮೃತಾ ಶೇರಗಿಲ್ ಅವರ ಕೃತಿಗಳಿಂದ ಪ್ರಭಾವಿತರಾಗಿ ಕಲಾ ವಿಮರ್ಶಾ ಲೇಖನಗಳನ್ನು ಬರೆದಿದ್ದಾರೆ. ಕಲಾವಿದ ಲೇಖಕ ದೇಸಾಯಿಯವರ ಮುಂಬಯಿ ರೇಡಿಯೊ ಕಾರ್ಯಕ್ರಮಕ್ಕೆ ಕೆ.ಕೆ.ಹೆಬ್ಬಾರರು ಸಂದರ್ಶನವನ್ನು ತೆಗೆದುಕೊಂಡಿದ್ದರು. ಆ ಸಂದರ್ಶನ ಮುಂಬಯಿರೇಡಿಯೊದಿಂದ ಪ್ರಸಾರ ಮಾಡಿದ್ದರು. ಈ ಕಾರ್ಯಕ್ರಮವು ಕನ್ನಡದಲ್ಲಿ ಇತ್ತು. ಇನ್ನೊಂದು ಟಿ.ವಿ.ಕಾರ್ಯಕ್ರಮದಲ್ಲಿ ಕೆ.ಕೆ.ಹೆಬ್ಬಾರರ 'ಹಾಡುವ ರೇಖೆಗಳು' (Singing Lines) ಎನ್ನುವ ಶೀರ್ಷಿಕೆಯನ್ನು ಸಮರ್ಥಿಸಿ ಮೂವತ್ತು ನಿಮಿಷಗಳ ಕಿರು ಚಿತ್ರವಾಗಿತ್ತು. ಕಲಾವಿದ, ಲೇಖಕ ಎನ್.ಸಿ.ದೇಸಾಯಿ ಮತ್ತು ಬಿ.ಎ ಸನದಿಯವರು ಸೇರಿ ಕೆ.ಕ.ಹೆಬ್ಬಾರರನ್ನು ಸಂದರ್ಶನ ಮಾಡಿ ಈ ಕಾರ್ಯಕ್ರಮವನ್ನು ನಡೆಸಿಕೊಟ್ಟರು.

ಎನ್.ಸಿ.ದೇಸಾಯಿಯವರು ಸಂಶೋಧನ ಲೇಖನಗಳಲ್ಲಿ ಒಂದು ಬರೆದ ಸಂತ ಕಲಾವಿದ ಸುಭಾರಾಯ ಪ್ರಸಿದ್ಧ ಸಂತಕವಿ, ಚಿತ್ರಕಾರ, ಸಮಾಜ, ಸುಧಾರಕ, ವೇದ ಶಾಸ್ತ್ರ ಸಂಪನ್ನರಾಗಿದ್ದರು. ಈತ ಕನ್ನಡ ನಾಡಿನಲ್ಲಿಯೇ ಹುಟ್ಟಿ ಬೆಳೆದರೂ 'ಶುಭರಾಯ'ರು ಹೋಗಿ ನೆಲೆಸಿದ್ದು ಇಂದಿನ ಕನ್ನಡ ನಾಡಿನ ಅಂಚಿನಲ್ಲಿರುವ ಸೊಲ್ಲಾಪುರದಲ್ಲಿ. ಅವರ ಚಿತ್ರಕಲೆ ಹೆಚ್ಚಾಗಿ ವಿಕಾಸ ಹೊಂದಿದ್ದೂ ಅಲ್ಲಿಯೇ. ಈಗ

ಅವುಗಳ ದಾಸ್ತಾನ ಆಗಿರುವುದೂ ಅಲ್ಲಿಯೇ. ಅಜ್ಞಾತ ಸಂತ ಚಿತ್ರಕಾರ ಶುಭರಾಯರನ್ನು ಕುರಿತು ಸಂಶೋದನೆ ಮಾಡಿ ಈ ವಿಷಯವನ್ನು ಲಲಿತಕಲಾ ಅಕಾಡೆಮಿಯವರಿಗೆ ತಿಳಿಸಿದರು. ಅಕಾಡೆಮಿಯವರು ದೇಸಾಯಿಯವರ ಸೂಚನೆಯ ಮೇರೆಗೆ ಒಂದು ಕಮ್ಮಟ(Seminor)ವನ್ನು ಸೊಲ್ಲಾಪುರದಲ್ಲಿ ಏರ್ಪಡಿಸಿದರು ಮತ್ತು ಈ ವಿಷಯ ಕುರಿತು ಒಂದು ಪುಸ್ತಕವು ಪ್ರಕಟಿತವಾಗಿದೆ. ಆ ಅವಧಿಯಲ್ಲಿ ಶ್ರೀ ಪಿ.ಆರ್ ತಿಪ್ಪೇಸ್ವಾಮಿಯವರು ಅಧ್ಯಕ್ಷರಾಗಿದ್ದರು.

ಎನ್.ಸಿ.ದೇಸಾಯಿಯವರು "ಯಾರಿಗೂ ಹೇಳೋಣು ಬ್ಯಾಡಾ" ಎಂಬ ಶೀರ್ಷಿಕೆಯ ಲೇಖನದಲ್ಲಿ ತಾವು ಕಂಡ ಅಂಬಿಕಾತನಯ ದತ್ತ ಹಾಗೂ ಅವರ ಕೃತಿಗಳ ಮೇಲೆ ಇರುವ ಅಭಿಮಾನವನ್ನು ವ್ಯಕ್ತಪಡಿಸಿದ್ದಾರೆ. ಪ್ರಜಾಮತ ವಾರಪತ್ರಿಕೆಯಲ್ಲಿ ಕುಳಕುಂದ ಶಿವರಾಯರ "ಸಾಧನ ಸಂಚಯ" ಅಂಕಣದಲ್ಲಿ ಪ್ರಕಟವಾಗುತ್ತಿತ್ತು. ಅಂತಹ ಒಂದು ಅಂಕಣದಲ್ಲಿ ಬೇಂದ್ರೆಯವರ ವಿಷಯದ ಮೇಲೆ ಲೇಖನ ಪ್ರಕಟವಾಗಿದೆ.

೧೯೪೩ ಡಿಸೆಂಬರ್ ತಿಂಗಳಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ಶಿವಮೊಗ್ಗದಲ್ಲಿ ನಡೆಯಿತು. ಆ ಸಮ್ಮೇಳನದ ವೇದಿಕೆಯ ಮೇಲೆ ಬೇಂದ್ರೆಯವರು ಅಧ್ಯಕ್ಷತೆ ವಹಿಸಿದ್ದರು. ಅವರನ್ನು ಕಂಡಾಗ ಎನ್.ಸಿ.ದೇಸಾಯಿಯವರಿಗೆ ಆನಂದ, ಅಚ್ಚರಿ, ಅಭಿಮಾನ ಎಲ್ಲವೂ ಒಟ್ಟಿಗೆ ಮೇಳೈಸಿದವು. ಬೇಂದ್ರೆಯವರು ಕಳುಹಿಸಿದ 'ಮೇಘದೂತ' ಮತ್ತೆ ಮತ್ತೆ ಓದಿ ಆನಂದಿಸಿದರು. ಹುಬ್ಬಳ್ಳಿಯಲ್ಲಿ ಇರುವ ಬೇಂದ್ರೆ ಕುಟೀರಕ್ಕೆ ಅನೇಕ ಕಲಾಕೃತಿಗಳನ್ನು ರಚನೆ ಮಾಡಿಕೊಟ್ಟಿದ್ದಾರೆ.

ಬೇಂದ್ರೆಯವರ ಮತ್ತೊಂದು ಕೃತಿ ಎನ್.ಸಿ.ದೇಸಾಯಿಯವರನ್ನು ಆಕರ್ಷಣೆ ಮಾಡಿತು. ಯಾರಿಗೂ ಹೇಳೋಣ ಬ್ಯಾಡ ಈ ಕವಿತೆಗೆ ಎನ್.ಸಿ.ದೇಸಾಯಿಯವರು ಮನೋರಂಜಿತ ಕಲಾಕೃತಿಗಳನ್ನು ಪ್ರತಿಯೊಂದು ನುಡಿಗು ಬರೆದು ಮತ್ತು ಕವಿತೆಯ ವಿಮರ್ಶೆ ಮಾಡಿದ್ದಾರೆ ಇದು ಕರ್ಮವೀರ ದೀಪಾವಳಿ ವಿಶೇಷಾಂಕ ೨೦೦೧ರ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಇದೇ ರೀತಿ ಅನೇಕ ಲೇಖನಗಳನ್ನು ಬರೆದಿದ್ದಾರೆ.

ಎನ್.ಸಿ.ದೇಸಾಯಿಯವರ ಕೈಚಳಕದಿಂದ ಮೂಡಿಬಂದ ಚಿತ್ರಗಳು, ಕ್ಯಾಮರಾ ಕಣ್ಣು ಸೆರೆ ಹಿಡಿದ ಛಾಯಚಿತ್ರಗಳು, ಊರೂರು ಸುತ್ತಿ ಸಂಗ್ರಹಿಸಿ ಸಂಶೋಧನೆ ಮಾಡಿ ಬರೆದ ಲೇಖನಗಳು ನಾಡಿನ ಅನೇಕ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ ಮತ್ತು ಮರಾಠಿ ಹಾಗೂ ಇಂಗ್ಲೀಷಿಗೆ ಅನುವಾದವಾಗಿವೆ. ಎಷ್ಟೋ ಲೇಖನಗಳನ್ನು ಇಂಗ್ಲೀಷಿನಿಂದ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಅವರು ಬರೆದ ಲೇಖನಗಳು ಸುಮಾರು ೨೦೦ಕ್ಕೂ ಹೆಚ್ಚು ಇದೆ. ಸಂಶೋಧನೆಯ ಸಮಯದ ಮಿತಿಯಲ್ಲಿ ಲಭ್ಯವಾದ ಲೇಖನಗಳು ಸುಮಾರು ೧೫೦ಕ್ಕೂ ಮಿಕ್ಕಿವೆ. ಅವುಗಳನ್ನೆಲ್ಲ ಕೆಳಗಿನಂತೆ ಪಟ್ಟಿಮಾಡಲಾಗಿದೆ.

ಎನ್.ಸಿ. ದೇಸಾಯಿಯವರ ಈ ವಿವರಗಳನ್ನು ಅವಲೋಕಿಸಿದರೆ ಅವರು ಏಕಕಾಲದಲ್ಲಿ ಕಲಾವಿದರಾಗಿ, ಕಲಾವಿಮರ್ಶಕರಾಗಿ, ಲೇಖಕರಾಗಿ, ಸಾಹಿತ್ಯ ಪ್ರೇಮಿಯಾಗಿ, ಸಂಶೋಧಕರಾಗಿ, ಛಾಯಾಗ್ರಹಕರಾಗಿ ಹೀಗೆ ಬಹುಮುಖ ವ್ಯಕ್ತಿತ್ವದಿಂದ ಅಜರಾಮರರಾಗಿದ್ದಾರೆ. ಅವರ ಕಲಾಸಾಹಿತ್ಯದ ಓದು, ವಿಮರ್ಶೆಯ ಒಳನೋಟಗಳು

ಅವರ ಕಲೆಯ ಹೊಸ ಹೊಸ ಪ್ರಯೋಗಕ್ಕೆ ನಾಂದಿಯಾಗಿದೆ. ಹಾಗೆಯೇ ಹಿರಿಯ ಸಾಹಿತಿಗಳೊಂದಿಗಿನ ಸ್ನೇಹ ಅವರ ಕಲಾಕೃತಿಗಳಿಗೆ ಹೊಸ ಮೆರುಗನ್ನು ತಂದಿದೆ ಎಂದು ತಿಳಿಯಬಹುದು. ಏಕಕಾಲಕ್ಕೆ ಹಲವು ಜ್ಞಾನಶಿಸ್ತುಗಳು ದೇಸಾಯಿಯವರಿಗೆ ಲಭಿಸಿದ್ದರಿಂದಾಗಿ ವೈಶಾಲ್ಯತೆಗೆ ಸಾಕ್ಷಿಯಾದರು. ಸಾಂಪ್ರದಾಯಿಕ, ಜನಪ್ರಿಯ ಈ ಎರಡೂ ಕಲೆಯನ್ನು ಮುಖಾಮುಖಿ ಮಾಡುವ ಈ ಕಾಲದೊಂದಿಗೆ ತಮ್ಮ ಕಲಾಕೃತಿಗಳನ್ನು ಸಮಕಾಲೀನಗೊಳಿಸುವ ಸೂಕ್ಷ್ಮದೃಷ್ಟಿಕೋನ ದೇಸಾಯಿಯವರಿಗೆ ಇತ್ತು. ಬಹುಶಃ ಈ ಸಾಧ್ಯತೆಯಿಂದಾಗಿಯೇ ಕಲಾತಪಸ್ವಿಯಾಗಿ ಎತ್ತರೆತ್ತರಕ್ಕೆ ಏರಲು ಸಾಧ್ಯವಾಯಿತು.

| ಕ್ರ.ಸಂ. | ದಿನಾಂಕ | ಪತ್ರಿಕೆಯ ಹೆಸರು | ಲೇಖನದ ತಲೆಬರಹ |
|---|---|---|---|
| ೧. | ೧೬.೫.೧೯೭೬ | ಉದಯವಾಣಿ | ಗಾಳಿ ನಡೆದು ಬಂದ ದಾರಿ |
| ೨. | ೬.೨.೧೯೭೭ | ಸುಧಾ | ಈಗ ಮುಂಬಯಿಗೆ ಬರುತ್ತಿದ್ದಾರೆ ಅರಬರು |
| ೩. | ಯುಗಾದಿ ವಿಶೇಷಾಂಕ ೧೯೮೦ | | ಸತ್ತು ನಗುತಲಿದೆ ನೋಡಿದಿರಾ |
| ೪. | ೧೩.೧.೧೯೮೦ | ಸುಧಾ | ನಿರಂತರವಾಗಿ ನಡೆವ ಎತ್ತಿನ ಜಾತ್ರೆ |
| ೫. | ೧೭.೧೦.೧೯೭೬ | ಸುಧಾ | ಎಂಬತ್ತು ಸಂದ ಭಾರತೀಯ ಚಲನಚಿತ್ರ |
| ೬. | ೨೩.೧೧.೧೯೮೦ | ಕನ್ನಡಪ್ರಭ | ಬಾಲ್ಯದಲ್ಲೇ ಮೆರೆದ ಮಹಿಮೆ : ಚಿದಂಬರರ ಹಿರಿಮೆ |
| ೭. | | | ಕನ್ನಡದ ಕಲಾವಿದೆ ಅನ್ನಪೂರ್ಣ ಸುಳ್ಳದಮಠ |
| ೮. | ೧೨.೧೨.೧೯೮೨ | ಕನ್ನಡಪ್ರಭ | ಸದ್ಬೋಧ ಚಂದ್ರಿಕೆ: ಮುಕ್ಕಾಲು ಶತಮಾನದ ಅವಿರತ ಸೇವೆ |
| ೯. | ೫.೧೨.೧೯೮೨ | ಸುಧಾ | ಅಮೃತ ಮಹೋತ್ಸವ ಆಚರಿಸುತ್ತಿರುವ ಸದ್ಬೋದ ಚಂದ್ರಿಕೆ |
| ೧೦. | ೧೫.೫.೧೯೮೩ | ತರಂಗ | ಉಪ್ಪಿನಕಾಯಿ ಅದಕ್ಕೆ ಇನ್ನೊಂದು ಹೆಸರ ಬೇಡೇಕರ್ |
| ೧೨. | ೧೯೭೩ದೀಪಾವಳಿ ವಿಶೇಷಾಂಕ | ಉದಯವಾಣಿ | ರಾಜಾಸ್ಥಾನ ಮಹಿಳೆಗೊಂದು ದೊಡ್ಡ ಹಬ್ಬ ತೇಜ. |
| ೧೩. | ೧೫.೫.೧೯೭೭ | ಕನ್ನಡಪ್ರಭ | ಕಳ್ಳಭಟ್ಟಿ ಸಾರಾಯಿ ದುರಂತಕ್ಕೆ ಕೊನೆಯೇ ಇಲ್ಲವೇ |
| ೧೪. | ೭.೫.೧೯೭೮ | ಕನ್ನಡಪ್ರಭ | ಆದಿಶಂಕರ ಮಂದಿರ |
| ೧೫. | ೯.೭.೧೯೮೧ | ಕನ್ನಡಪ್ರಭ | ಮುಂಬೈನಲ್ಲಿ ದೇವರಗತಿ |
| ೧೬. | ೩.೭.೧೯೮೨ | ಕನ್ನಡಪ್ರಭ | ಶುಚಿಯಲ್ಲದಿದ್ದರೂ ಇದು ರುಚಿ. |
| ೧೭. | ೧೯೮೧ ದೀಪಾವಳಿ ವಿಶೇಷಾಂಕ | ಉದಯವಾಣಿ | ವಿಜಾಪುರದ ವೈಭವೀ ವಾಸ್ತುಶಿಲ್ಪ |

| | | | |
|---|---|---|---|
| ೧೮. | ೧೧.೯.೧೯೮೩ | ತರಂಗ | ಚಿಕಣಿ ಚಿತ್ರಕಲೆಯ ಬೃಹತ್ ಸ್ವರೂಪ ಕೃಷ್ಣನ ವಿರಾಟ್ ರೂಪಗಳು |
| ೧೯. | ೨೩.೧೦.೧೯೮೩ | ತರಂಗ | ಶಿರ್ಡಿಯ ಸಾಯಿಬಾಬಾ ಪವಾಡ ಪುರುಷರ, ಸಾಮಾಜಿಕ ಪ್ರವರ್ತಕ |
| ೨೦. | ೪.೭.೧೯೮೪ | ಸಂ. ಕರ್ನಾಟಕ | ಸದ್ಬೋದ ಚಂದ್ರಿಕೆ ಅಮೃತ ಮಹೋತ್ಸವ |
| ೨೧. | ೧೯೮೧ | ಉದಯವಾಣಿ | ವಾರಲಿ ಗಿರಿಜನರ ಜೀವನ ಚಿತ್ರಕಲೆ |
| ೨೨. | ೧೧.೫.೧೯೮೬ | ತರಂಗ | ಸಮುದ್ರ ಸ್ನಾನಮೃತ್ಯುವಿಗೆ ಆಹ್ವಾನ |
| ೨೩. | ೧೦.೯೧೯೮೬ | ಕಸ್ತೂರಿ | ಸಂತ ಚಿತ್ರಕಾರ ಶುಭರಾಯ |
| ೨೪. | ೪.೪.೧೯೮೫ | ಕಸ್ತೂರಿ | ಕಾಲನಿರ್ಣಯ |
| ೨೫. | ೧೯೯೫ | ಉದಯವಾಣಿ | ಜಯದೇವ ಕವಿ ಕವಿಕಾವ್ಯ |
| ೨೬. | ೧೧.೧೧.೧೯೮೪ | ಉದಯವಾಣಿ | ಒಂದು ಶತಮಾನದ ಹಿಂದೆ ಭಾರತದಲ್ಲಿ ಛಾಯಾಚಿತ್ರ |
| ೨೭. | ೪.೧೧.೧೯೮೪ | ಪ್ರಜಾವಾಣಿ | ಹಾನಗಲ್ಲಿನ ತಾರಕೇಶ್ವರ ದೇವಾಲಯ ವೈವಿಧ್ಯಮಯ ಶಿಲ್ಪಕಲೆಯ ವೈಭವ |
| ೨೮. | ೯.೪.೧೯೮೫ | ನವನಾಡು | ಆನಂದವನದ ಸಾಧುಗಳು |
| ೨೯. | ೨೬.೭.೧೯೮೪ | ಕನ್ನಡಪ್ರಭ | ಸಜೀವ ನಾಗಗಳ ಪೂಜೆ ಪವಾಡವಲ್ಲ |
| ೩೦. | ೧೦.೧೧.೧೯೮೫ | ಪ್ರಜಾಮತ | ಕೃಷ್ಣಾವತಾರ ಶುಭರಾಯರ ಚಿತ್ರಮಾಲಿಕೆ |
| ೩೧. | | ತರಂಗ ಹುಟ್ಟುಹಬ್ಬದ ವಿಶೇಷಾಂಕ | ಕಲಾವಿದರ ಕುಂಚದಲ್ಲಿ ಬೇಂದ್ರೆಯವರ ಮೇಘದೂತ |
| ೩೨. | ೧೯೯೫ | ತರಂಗ ೧೨ನೇ ಹುಟ್ಟು ಹಬ್ಬದ ಸಂಚಿಕೆ | ಶಿವಾಜಿ ಸಾಹಸದ ಸಹ್ಯಾದ್ರಿ ಕೋಟೆಗಳು |
| ೩೩. | ೫.೮.೧೯೮೪ | ತರಂಗ | ಬತ್ತೀಸ ಶಿರಾಳೆ ಇಲ್ಲಿ ಸಜೀವ ನಾಗನನ್ನೇ ಪೂಜಿಸುತ್ತಾರೆ |
| ೩೪. | ೧೯೯೫ | ಕರ್ಮವೀರ ದೀಪಾವಳಿ ವಿಶೇಷಾಂಕ | ಕಣ್ಮನ ಸೆಳೆವ ಜಲದುರ್ಗ ಜಂಜೀರ ಮುರೂಡ |
| ೩೫. | ೯.೪.೧೯೯೫ | ತರಂಗ | ನಾಡಿಗೇ ಬೆಳಕನ್ನು ನೀಡುವ ಶರಾವತಿಯ ಮೂಲ ಅಂಬುತೀರ್ಥ ಕತ್ತಲಿನಲ್ಲಿ |
| ೩೬. | ಮಾರ್ಚ್ ೨೦೦೦ | ಸದ್ಬೋದ ಚಂದ್ರಿಕೆ | ಹಾನಗಲ್‌ದಲ್ಲಿಹಾಯ್ದು ಹಾವೇರಿ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳ ಪರಿಚಯ. |
| ೩೮. | ೨.೨.೧೯೯೭ | ಸಂಯುಕ್ತ ಕರ್ನಾಟಕ | ಉಣಕಲ್ಲು ಚಂದ್ರಮೌಳೇಶ್ವರ ದೇಗುಲದ ಶಿಲ್ಪಸಿರಿ. |

| | | | |
|---|---|---|---|
| ೩೯. | ೧೦.೨.೧೯೯೩ | ಸಂಯುಕ್ತ ಕರ್ನಾಟಕ | ಸಂಕ್ರಾಂತಿಯ ಮೇಜು ಬಣ್ಣದ ಪಟಗಳ ಹಬ್ಬ. |
| ೪೦. | ೧೮.೬.೨೦೦೦ | ಕರ್ಮವೀರ | ಕರ್ಜಗಿ ಕಾರುಹುಣ್ಣಿಮೆ. |
| ೪೧. | ೨೦.೧೨.೧೯೯೨ | ಕರ್ಮವೀರ | ಊರ ತುಂಬ ಉದ್ಯಾನಗಳು. |
| ೪೨. | ೨.೨.೨೦೦೦ | ಸಂಯುಕ್ತ ಕರ್ನಾಟಕ | ಖಿಡಕ್ ಜೋಳದ ರೊಟ್ಟಿ ಜ್ಯೋತಿ ಉದ್ಯೋಗದ ಖ್ಯಾತಿ. |
| ೪೩. | ದೀಪಾವಳಿ ೧೯೭೪ | ಉದಯವಾಣಿ | ಪ್ರಾಚೀನ ಭಾರತದಲ್ಲಿ ಕೇಶಾಲಂಕಾರ. |
| ೪೪. | ೨೨.೨.೧೯೭೬ | ಕನ್ನಡಪ್ರಭ | ಮುಂಜ್ಜೆ ಅಗ್ನಿಕಾಂಡದ ದಾರುಣಕಲೆ. |
| ೪೫. | "" | "" | ಎಷ್ಟೊಂದು ಬಣ್ಣಸಲಿ ಗಣಪ ನಿನ್ನಯ ರೂಪ |
| ೪೬. | ೮.೯.೧೯೯೧ | ಪ್ರಜಾವಾಣಿ | ವಿದೇಶಗಳಲ್ಲಿ ವಿನಾಯಕ ವೈವಿಧ್ಯ. |
| ೪೭. | ೧೫.೬.೧೯೯೬ | ಸಂಯುಕ್ತ ಕರ್ನಾಟಕ | ಗಣೇಶೋತ್ಸವದ ಐತಿಹಾಸಿಕ ಪರಂಪರೆ. |
| ೪೮. | ೧೩..೨.೧೯೮೩ | ಉದಯವಾಣಿ | ಚಿತ್ರರಸಿಕನ ಅಭಿರುಚಿ ಬದಲಾಗುತ್ತೀದೆಯೆ? |
| ೪೯. | ೬..೭.೧೯೯೯ | ತರಂಗ | ಬುತ್ತಿಯೂ ಕಲಾಕಾರಿಸಿಗೊಂದು ಮಾಧ್ಯಮ |
| ೫೦. | ೨೩.೫.೧೯೯೩ | ಸಂಯುಕ್ತ ಕರ್ನಾಟಕ | ಕಲಾತಪಸ್ವಿ. ಎಸ್.ಎಂ.ಪಂಡಿತರು |
| ೫೧. | ಅಕ್ಟೋಬರ್ ೧೯೮೧ | ಕಸ್ತೂರಿ | ಜಂತರ್ ಮಂತರ್ ಕಥೆ |
| ೫೨. | ೨೮.೧೨.೨೦೦೦ | ಉದಯವಾಣಿ | ಬಿಹಾರದ ಒಂದು ಜಾನಪದ ಚಿತ್ರಕಲೆ "ಮದುಬನಿ" |
| ೫೩. | "" | "" | ಧಗೆಯ ಬೆಂಕಿಯಲ್ಲಿ ಏನಿದು ಬದುಕು |
| ೫೪. | ೧೯.೫.೧೯೮೩ | ಉದಯವಾಣಿ | ದಾದರಿಯಲ್ಲಿ ನಿರ್ಮಾಣಗೊಳ್ಳುತ್ತಿರುವ ಸ್ವಾಮಿ ನಾರಾಯಣ ಸುಂದರ ಮಂದಿರ |
| ೫೫. | ೧೪.೬.೧೯೯೨ | ಸಂಯುಕ್ತ ಕರ್ನಾಟಕ | ಕರ್ಜಗಿ ಕಾರಹುಣ್ಣಿಮೆ: ಪೌರುಷ ಪ್ರಧಾನ ಹಬ್ಬ |
| ೫೬. | ೨೬.೨.೧೯೯೫ | ತರಂಗ | ಕನ್ನಡ ಸಾಹಿತ್ಯಕ್ಕೆ ಶ್ರೀಮಂತಿಕೆ ತಂದುಕೊಟ್ಟ ಗಳಗನಾಥ ೧೨೫ ವರ್ಷ |

| | | | |
|---|---|---|---|
| ೫೭. | ೮.೨.೧೯೯೯ | ಸುಧಾ | ಲಗಡಿಯ ಸಾಧುಗಳು, ಶಿಶುನಾಳ ಶರೀಫರು |
| ೫೮. | ೧೧.೪.೨೦೦೧ | ವಿಜಯ ಕರ್ನಾಟಕ | ಅಗಡಿಯ ಸಾಧುಗಳು, ಶಿಶುನಾಳ ಶರೀಪರು |
| ೫೯. | ೭.೪.೧೯೯೯ | ನರ್ವೋದಯ ಗದಗ | ಕನ್ನಡದ ಜ್ಯೋತಿಯನ್ನು ಬೆಳಗಿಸಿದ ಸಾಧು ಶೇಪರು |
| ೬೦. | ೨೦೦೦ | ಕನ್ನಡಪ್ರಭ ದೀಪಾವಳಿ ವಿಶೇಷಾಂಕ | ಶಿಲಾಬಾಲಿಕೆಯರ ಕೇಶಾಲಂಕಾರ |
| ೬೧. | ಮೇ ೨೦೦೧ | ತುಷಾರ | ಜೀವನೋತ್ಸಾಹದ ಋತುವಸಂತ |
| ೬೨. | ೨೪.೧೦.೧೯೭೭ | ಕನ್ನಡ ಪ್ರಭ | ಜಡ ಭರತರಿಗೆ ಅಭಿನಂದನೆ |
| ೬೩. | ೧.೯.೧೯೭೭ | ಕನ್ನಡ ಪ್ರಭ | ಕನ್ನಡ ಸಂಘದ ಸಭಾಗೃಹಕ್ಕೆ ಎಂ.ವಿ.ಹಸರಿಲ್ಲ |
| ೬೪. | ೨.೬.೨೦೦೧ | ಸಂಯುಕ್ತ ಕರ್ನಾಟಕ | ಮಹಾರಾಷ್ಟ್ರ ಕರ್ನಾಟಕದ ಸಂತ ಸೇತುವೆ ದಾಸಗಣಾಚಾರಾಮರು |
| ೬೫. | ೨೦.೧೨.೧೯೭೬ | ಕನ್ನಡಪ್ರಭ | ಮುಂಬೈ ಪತ್ರ ಮೈಸೂರು ಅಸೋಸಿಯೇಷನ್ ಸ್ವರ್ಣ ಮಹೋತ್ಸವ |
| ೬೬. | ೧೯.೯.೧೯೯೯ | ಮೂಡಣ | ವೈದ್ಯಕೀಯ ಕ್ಷೇತ್ರದಲ್ಲಿ ವಿಶೇಷ ಡಾಕ್ಟರೇಟ್ ಪಡೆದ ಡಾ. ಮೂರ್ತಿಯವರ ಕೀರ್ತಿ |
| ೬೭. | ೧೯.೧೦.೧೯೯೬ | ಸಂಜೆವಾಣಿ | ಅಯ್ಯೋ "ಹೂ ಬಳ್ಳಿಯೆ" |
| ೬೮. | ೩,೪.೨.೨೦೦೧ | ಸಾಹಿತ್ಯ ಸೌರಭ | ಹಾವೇರಿ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು |
| ೬೯. | ೨೬.೮.೨೦೦೧ | ಕರ್ಮವೀರ | ಈ ದೇವರಿಗೆ ಕುದುಗೆಯ ಅರ್ಪಣೆಯೇ ಪ್ರೀತಿ |
| ೭೦. | ೧೮.೪.೨೦೦೨ | ತರಂಗ | ಸ್ವಸ್ತಿಕ ಪೂಜಾ ಸ್ವಸ್ತಿ ಕದ್ದಾದರೂ ಆರಾಧನೆ ಸೂರ್ಯನದು |
| ೭೧. | ೨೬.೫.೨೦೦೨ | ಸಂಯುಕ್ತ ಕರ್ನಾಟಕ | ಗಂಗೌರ ರಾಜಸ್ಥಾನದ ಗೌರಿಹಬ್ಬ |
| ೭೨. | ಡಿಸೆಂಬರ್ ೨೦೦೨ | ತುಷಾರ | ನಕ್ಕು ನಲಿಯುವ ನತ್ತು |
| ೭೩. | ೮.೮.೨೦೦೨ | ತರಂಗ | ಕಚ್ಛ್ ಕೇವಲ ಮರಳು ಭೂಮಿಯಲ್ಲ. |
| ೭೪. | ೭.೯.೧೯೭೫ | ಉದಯವಾಣಿ | ಮುಂಬೈಯಲ್ಲಿ ಗಣಪತಿ |
| ೭೫. | ೧.೮.೧೯೭೬ | ಕನ್ನಡಪ್ರಭ | ಕುದುರೆ ಟ್ರಮ್‌ನಿಂದ ಡಬಲ್ ಡೆಕ್ಕರವರೆಗೆ |
| ೭೬. | ೫.೬.೧೯೭೭ | ಸುಧಾ | ಸೌತೆಕಾಯಿ ಬೇಕ್ ಥಂಡಾ ಸೌತೆಕಾಯಿ? |
| ೭೭. | ೬.೭.೧೯೮೦ | ಪ್ರಜಾಮತ | ಭಾರತೀಯ ಆದಿವಾಸಿಗಳು |

| | | | |
|---|---|---|---|
| ೭೮. | ೧೨.೧೯೮೨ | ತುಷಾರ | ಪುಣೆಯ ಕೇಶಕರ ವಸ್ತು ಸಂಗ್ರಹಾಲಯ |
| ೭೯. | ೧೯೯೮ | ಕನ್ನಡಪ್ರಭ ದೀಪಾವಳಿ ವಿಶೇಷಾಂಕ | ಮಲ್ಹಾರಿ ಮಲ್ಹಾರ್ |
| ೮೦. | ೨೮.೧೧.೧೯೮೦ | | |
| ೮೧. | ೮.೧೧.೧೯೮೧ | ಸುಧಾ | ದಿಲ್ಲಿಗೆ ಬಂದರು ಹಳ್ಳಿಯವರು |
| ೮೨. | ೨೩.೮.೧೯೮೧ | ಕನ್ನಡಪ್ರಭ | ಮಾತಾಂಗ ಮುಂಬೈಯಲ್ಲಿನ ಮರಿ ಮಾದರಾಸು |
| ೮೩. | ೧.೫.೧೯೮೩ | ತರಂಗ | ಲಜ್ಜತ್ ಪಾಪಡ್ ಸಾಹಸ್ |
| ೮೪. | ೭.೧೯೮೪ | ತುಷಾರ | ಮೂರೂಡು ಜಂಜೀರ್ |
| ೮೫. | ೧೧.೧೯೮೪ | ಕಸ್ತೂರಿ | ಅಬ್ಬಾ, ಎಷ್ಟೊಂದು ವಿಶೇಷಾಂಕಗಳು ಡ್ರೈವ್ ಇನ್‌ಡಿವೇಟರ್ |
| ೮೬. | ೧೧.೧೨.೧೯೯೭ | ಕನ್ನಡಪ್ರಭ | ಈಗ ಮುಂಬೈಯಲ್ಲಿ, ಮುಂದೆ ಬೆಂಗಳೂರಿನಲ್ಲಿ |
| ೮೭. | ೧೧.೧.೧೯೭೬ | ಸುಧಾ | ಹಾವೇರಿಯ ಪುರಸಿದ್ದಪ್ಪನ ಗುಡಿ |
| ೮೮. | ೩೦.೭.೧೯೭೮ | ಸುಧಾ | ಬಯಲುಸೀಮೆಯ ತಂಪು ನೆಲ ಸೊಗಲ |
| ೮೯. | ೪.೬೧.೯೭೮ | ಉದಯವಾಣಿ | ಮುಂಬೈಯಲ್ಲಿ ಶ್ರೀ ಆದಿ ಶಂಕರಾಚಾರ್ಯ ಮಂದಿರ |
| ೯೦. | ೯.೧೯೮೧ | ತುಷಾರ | ಜಯಂತಿಲಾಲ್ ಸಿಹೋರ್ |
| ೯೧. | ೧೭.೧.೧೯೮೨ | ಕನ್ನಡಪ್ರಭ | ಲಂಬಾಣಿಗಳದೇ ಒಂದು ಜಾತ್ರೆ |
| ೯೨. | ೧೯೮೨ | ಉದಯವಾಣಿ ದೀಪಾವಳಿ ವಿಶೇಷಾಂಕ | ಗುಲಾಬಿನಗರ್ ಜಯಪುರ್ |
| ೯೩. | ೧೯೮೩ | ಉದಯವಾಣಿ ದೀಪಾವಳಿ ವಿಶೇಷಾಂಕ | ಸರೋವರಗಳ ನಗರ ಉದಯಪುರ್ |
| ೯೪. | ೧೨.೭.೧೯೮೪ | ಉದಯವಾಣಿ | ಆನಂದವನ ಗ್ರಾಮೀಣ ಭಾಗದಲ್ಲಿ ಅರಳಿದ ಮಹಾಗ್ರಂಥ |
| ೯೫. | ೧೯೮೬ | ಉದಯವಾಣಿ ದೀಪಾವಳಿ ವಿಶೇಷಾಂಕ | ಒರಿಸ್ಸಾ ಜನಪದ ಚಿತ್ರಕಲೆ ಪಟ್ಟಾ ಚಿತ್ರ |
| ೯೬. | ೧೮.೧.೧೯೮೫ | ನವನಾಡು | ಕುರುಡು ಕಣ್ಣುಗಳಿಗೆ ಪ್ರೇಮಪ್ರಕಾಶ |
| ೯೭. | ೨೨.೪.೧೯೮೪ | ತರಂಗ | ಆನಂದವನದ ಸದ್ಬೋದ ಚಂದ್ರಿಕೆಯ ಅಮೃತೋತ್ಸವ |
| ೯೮. | ೧೧.೩.೧೯೮೫ | ತರಂಗ | ಮೂಲೆಯಲ್ಲಿ ಕೊಳೆಯುತ್ತಿರುವ ಬ್ರಿಟಿಷ್ ರಾಜಕಾರಣಿಯರ ಪ್ರತಿಮೆಗಳು |
| ೯೯. | ೧೧.೩.೧೯೮೪ | ಪ್ರಜಾಮತ | ಮುಕ್ಕಾಲು ಶತಮಾನ ಅಪೂರ್ವ ಇತಿಹಾಸ |
| ೧೦೦. | ೧೮.೫.೧೯೮೬ | ಉದಯವಾಣಿ | ಮಾಥರಾ ಸೂರ್ಯ ಮಂದಿರದ ಅಪರೂಪದ ಶಿಲ್ಪ ಸಂಪತ್ತು |

| | | | |
|---|---|---|---|
| ೧೨೪. | ೭.೪.೨೦೦೧ | ಸಂಯುಕ್ತ ಕರ್ನಾಟಕ | ಅಗಡಿಯ ಸಾಧುಗಳು, ಶಿಶುನಾಳ ಶರೀಫರು |
| ೧೨೫. | ೨೭.೨.೨೦೦೨ | ವಿಜಯ ಕರ್ನಾಟಕ | ದಿ. ೨೯ ಜಾಲಿಹಾಳದಲ್ಲಿ ಬ್ರಹ್ಮಾನಂದರ ಮೂರ್ತಿ ಪ್ರತಿಷ್ಠಾಪನೆ |
| ೧೨೬. | ೩.೩.೧೯೭೬ | | ಹತ್ತು ವರ್ಷಗಳ ಹೆಮ್ಮರವಾಗಿ ಬೆಳೆದಿರುವ ಮುಂಬೈನ ಕನ್ನಡ ವನಿತಾ ಸಮಾಜ |
| ೧೨೭. | | ಸದ್ಬೋಧ ಚಂದ್ರಿಕೆ | ಆನಂದವನದ ಗ್ರಂಥ ಬಿಡುಗಡೆಯ ಸಮಾರಂಭ |
| ೧೨೮. | """" | ಸಂಯುಕ್ತ ಕರ್ನಾಟಕ | ಅವತಾರ ಪುರುಷ ಶಿವಚಿದಂಬರರು |
| ೧೨೯. | ೨೩.೪.೧೯೯೭ | ಸಂಜೆವಾಣಿ | ಸಾಧು ಶೇಷಾಚಲರ ೧೪೯ನೇ ಜನ್ಮೋತ್ಸವ |
| ೧೩೦. | ೨೦.೫.೨೦೦೧ | ಕರ್ಮವೀರ | ಮರ ಉಳಿಸಲು ಹೋಗಿ ಅಮರರಾದವರು |
| ೧೩೧. | ೩೦.೧೧.೧೯೭೭ | "" | ಮುಂಬೈ ಕನ್ನಡ ರಂಗಭೂಮಿ ಪ್ರತಿಭಾವಂತರ ತಂಡ |
| ೧೩೨. | ೨೪.೧೧.೧೯೭೬ | ಕನ್ನಡಪ್ರಭ | ಕಲಾವಿದ ಕೆ.ಕೆ. ಹಾಬ್ಬಾರರಿಗೆ ಸನ್ಮಾನ |
| ೧೩೩. | "" | ಕನ್ನಡಪ್ರಭ | ಈ ವಸಂತನಾದ ಇನ್ನೆಲ್ಲಿ? |
| ೧೩೪. | ೨೮.೧.೧೯೭೬ | ಕನ್ನಡಪ್ರಭ | ಐವತ್ತು ವರ್ಷಗಳ ಸಾರ್ಥಕ ಬದುಕು |
| ೧೩೫. | ೨೮.೨.೧೯೮೪ | ನವನಾಡು | ಕನ್ನಡಿಗರ ಸಾಂಸ್ಕೃತಿಕ ಸಂಭ್ರಮ |
| ೧೩೬. | ೨೬.೬.೨೦೦೧ | ವಿಜಯ ಕರ್ನಾಟಕ | ಅಗಡಿ ಸಾಧುಗಳ ಪರಮಶಿಷ್ಯ ನಾರಾಯಣ ಭಗವಾನರು |
| ೧೩೭. | ೨೬.೬.೨೦೦೧ | ಸಂಯುಕ್ತ ಕರ್ನಾಟಕ | ಅಗಡಿ ಸಾಧುಗಳ ಪರಮಶಿಷ್ಯ ನಾರಾಯಣ ಭಗವಾನರು |
| ೧೩೮. | "" | "" | ಅಗಲಿದ ಕನ್ನಡದ ಹಿರಿಯರಿಗೆ ಶ್ರದ್ಧಾಂಜಲಿ |
| ೧೩೯. | ೬.೨೦೦೧ | ಸದ್ಬೋಧ ಚಂದ್ರಿಕೆ | ಭಗವಾನರ ಉಜ್ವಲವಾಣಿ |
| ೧೪೦. | ೧೯.೮.೨೦೦೧ | ಕನ್ನಡಪ್ರಭ | ಕಲಾಕಲ್ಪನೆಯಲ್ಲಿ ಕರಿಮುಖ |
| ೧೪೧. | ೨೦೦೧ | ಕನ್ನಡಪ್ರಭ | ಆನೆಗಳ ಮೇಲೆ ದೀಪಾರತಿ |
| ೧೪೨. | | ಸದ್ಬೋಧ ಚಂದ್ರಿಕೆ | ಹುಬ್ಬಳ್ಳಿಯಲ್ಲೊಂದು ಚಿದಂಬರ ದೇವಸ್ಥಾನ |
| ೧೪೩. | ೫.೨೦೦೨ | ಕಸ್ತೂರಿ | ಕಾರ್ಲೆ ಗುಹೆಗಳು ಬೌದ್ಧ ಸಂಸ್ಕೃತಿಯ ಬೆಳಕಿಂಡಿ |
| ೧೪೪. | ೩.೯.೧೯೮೯ | ಸಂಯುಕ್ತ ಕರ್ನಾಟಕ | ಕಡಲಾಚೆಯ ಕರಿವದನ |
| ೧೪೫. | ೧೩.೮.೨೦೦೨ | ಕನ್ನಡಪ್ರಭ | ನಾಗಬನಗಳು ದಕ್ಷಿಣ ಕನ್ನಡದ ವಿಶೇಷ |
| ೧೪೬. | ೧೩.೪.೨೦೦೩ | ಸಂಯುಕ್ತ ಕರ್ನಾಟಕ | ಕುಂದಾ ನಾಡಿನ ಕಮಲಬಸಚಿ |



ಎನ್.ಸಿ. ದೇಸಾಯಿಯವರು ಬರವಣಿಗೆಯಲ್ಲಿ ತೊಡಗಿರುವುದು



ತಮ್ಮ ಆದಿತ್ಯ ಸ್ಟುಡಿಯೋದಲ್ಲಿ ವಾಣಿಜ್ಯ ಕ್ಷೇತ್ರಕ್ಕೆ ಸಂಬಂಧಿಸಿದ ಕೃತಿಗಳನ್ನು ರಚನೆ ಮಾಡುತ್ತಿರುವಾಗಿನ ದೃಶ್ಯ

## ಅಧ್ಯಾಯ ಐದು

## ಸಂದ ಪ್ರಶಸ್ತಿ, ಗೌರವ, ಪ್ರಶಂಸೆಗಳು

ಎನ್.ಸಿ. ದೇಸಾಯಿಯವರು ಮಾಡಿದ ಕಾರ್ಯ ಸಾಧನೆ ಮತ್ತು ಅವರಿಗೆ ಸಂದ ಪ್ರಶಸ್ತಿ, ಗೌರವ ಪ್ರಶಂಸೆಗಳ ಸಂಕ್ಷಿಪ್ತ ಪರಿಚಯ ಮಾಡಲಾಗಿದೆ. ಇವರ ಜೀವನದುದ್ದಕ್ಕೂ ೨೦೦ಕ್ಕೂ ಹೆಚ್ಚು ಲೇಖನಗಳನ್ನು ಬರೆದಿದ್ದಾರೆ. ಇವರು ಚಿತ್ರಕಲಾವಿದರಲ್ಲದೇ ಇವರೊಬ್ಬ ಉತ್ತಮ ಲೇಖಕರಾಗಿ, ಸಂಶೋಧಕರಾಗಿ, ಛಾಯಾಚಿತ್ರಕಾರರಾಗಿ ಹಾಗೆಯೇ ಅಷ್ಟೇ ಶ್ರೇಷ್ಠ ಪತ್ರಕರ್ತರೂ ಆಗಿದ್ದರು. ಮುಂಬೈಯಿಂದ ಕನ್ನಡ ಪ್ರಭಾವಕ್ಕೆ ಮುಂಬೈ ಪತ್ರವೆಂದು ಕೆಲವು ವರ್ಷ ವರದಿ ಮಾಡಿದ್ದುಂಟು.

ಎನ್.ಸಿ. ದೇಸಾಯಿಯವರು ಜೀವನದುದ್ದಕ್ಕೂ ಸಾವಿರಾರು ಕಲಾಕೃತಿಗಳನ್ನು ರಚನೆ ಮಾಡಿದ್ದಾರೆ. ವಿಶ್ವವ್ಯಾಪಿ ಗಣೇಶನ ಕೃತಿಗಳು ೪೦ಕ್ಕೂ ಹೆಚ್ಚು. ಸ್ವಾಮಿ ವಿವೇಕಾನಂದರು ಕೃತಿಗಳು ೫೦ಕ್ಕೂ ಹೆಚ್ಚು. ಬೇಂದ್ರೆ ಕವಿತೆಗಳ ಮೇಲೆ ೧೦-೧೫ ಕೃತಿಗಳು, ಕವಿ ಗೀತಗೋವಿಂದನ ಮೇಲೆ ಹಲವಾರು ಕಲಾಕೃತಿಗಳನ್ನು ರಚನೆ ಮಾಡಿದ್ದಾರೆ. ವರ್ಣ ಮಾಧ್ಯಮದಲ್ಲಿ ಹಲವಾರು ನಿಸರ್ಗ ಮಾಡಿದ ಕಲಾಕೃತಿಗಳು ಇವೆ. ಜೀವನದುದ್ದಕ್ಕೂ ನೂರಾರು ಭಾವಚಿತ್ರಗಳನ್ನು ಮಾಡಿಕೊಟ್ಟಿದ್ದಾರೆ. ಸಾವಿರಾರು ಛಾಯಾಚಿತ್ರಗಳನ್ನು ತೆಗೆದು ಪತ್ರಿಕೆಗಳಿಂದ ಪ್ರಕಟವಾಗಿವೆ, ನಮ್ಮ ನಾಡಿನ ಅನೇಕ ಪ್ರಸಿದ್ಧ ಸುಪ್ರಸಿದ್ಧ ಪತ್ರಿಕೆಗಳಿಗೆ ಮುಖಪುಟ ವಿನ್ಯಾಸ ಮತ್ತು ಕ್ಯಾಲೆಂಡರ್ ವಿನ್ಯಾಸಗಳನ್ನು ೫-೬ ದಶಕಗಳವರೆಗೂ ನಿರಂತರವಾಗಿ ಮಾಡಿದ್ದಾರೆ. ನಮ್ಮ ದೇಶದ ವಿವಿಧ ವೇಷಗಳ ಸಂಪ್ರದಾಯಿಕ ಮಹಿಳೆ ಮತ್ತು ಪುರುಷರನ್ನು ತಮ್ಮ ಕೃತಿಗಳಲ್ಲಿ ಅವರ ವೇಷಭೂಷಣಗಳನ್ನು ಸೆರೆ ಹಿಡಿದಿದ್ದಾರೆ. ಎನ್.ಸಿ.ದೇಸಾಯಿಯವರ ನಿವೃತ್ತಿ ನಂತರ ದಿನನಿತ್ಯ ಅನೇಕ ವಾಣಿಜ್ಯ ಚಿತ್ರಗಳನ್ನು ರಚಿಸಿದ್ದಾರೆ. ಈ ಕಲಾವಿದನಿಗೆ ಕಲೆಯೇ ಉಸಿರಾಗಿತ್ತು ಮತ್ತು ಕಲೆಯೇ ಬದುಕಾಗಿತ್ತು.

ವಿಶ್ವವ್ಯಾಪ್ತಿ ಗಣೇಶನ ಕಲಾಕೃತಿಗಳು ಹಾಗೂ ಇವರ ಉಳಿದ ವರ್ಣಚಿತ್ರಗಳು ಮುಂಬೈ, ಹುಬ್ಬಳ್ಳಿ, ಹಾವೇರಿ, ಧಾರವಾಡ, ಮೈಸೂರು, ಪುಣೆ ಮತ್ತು ಇನ್ನಿತರ ಸ್ಥಳಗಳಲ್ಲಿ ಪ್ರದರ್ಶನಗೊಂಡಿವೆ. ಇವರ ಕಲಾ ಪ್ರದರ್ಶನ ಮಾಡಿದ ಕೆಲವು ಸ್ಥಳಗಳಿಗೆ ವಿದ್ಯಾರ್ಥಿಗಳಿಗೆ ಪ್ರಾತ್ಯಕ್ಷಿತೆಕೆಗಳನ್ನು ನೀಡಿದ್ದಾರೆ.

ಎನ್.ಸಿ. ದೇಸಾಯಿಯವರ ಸಾಧನೆಯನ್ನು ಗಮನಿಸಿ ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಮಂತ್ರಾಲಯ ಖಾತೆಯ ಸಾಂಸ್ಕೃತಿಕ ವಿಭಾಗದಿಂದ (Out Standing Artist) ಎಂದು ಫೆಲೋಶಿಪ್ ನೀಡಿದೆ.

೧೯೯೯-೨೦೦೦ನೇ ಸಾಲಿನ ಕರ್ನಾಟಕ ಲಲಿತಕಲಾ ಅಕಾಡೆಮಿಯ ಗೌರವ ಪ್ರಶಸ್ತಿ ಇವರಿಗೆ ನೀಡಲಾಗಿದೆ. ಹುಬ್ಬಳ್ಳಿ ಧಾರವಾಡ ನಗರ ಪಾಲಿಕೆಯವರು ಧೀಮಂತ ನಾಗರಿಕ ಕಲಾವಿದ ಎಂದು ಪ್ರಶಸ್ತಿ ನೀಡಿದ್ದಾರೆ. ಹುಬ್ಬಳ್ಳಿಯ ಶ್ರೀನಗರ ವಿದ್ಯಾಸಂಸ್ಥೆಯು ಕಲಾಶ್ರೀ ಪ್ರಶಸ್ತಿ ನೀಡಿದೆ. ಹಾವೇರಿಯವರು ಕಡಕೋಳ ಪ್ರಶಸ್ತಿ ನೀಡಿ ಗೌರವಿಸಿದ್ದಾರೆ.

ಉಡುಪಿಯ ಸಾಲಿಗ್ರಾಮದ ಡಿವೈನ್ ಪಾರ್ಕ್, ಕೋರಿದ ಕಾರಂತ ವಿದ್ಯಾಸಂಸ್ಥೆ, ಹಾವೇರಿಯ ಕಡಕೋಳ ಪ್ರತಿಷ್ಠಾನ, ಬೆಂಗಳೂರಿನ ಯಾಜ್ಞವಲ್ಕ್ಯಾಶ್ರಮ, ರವಿ ಪ್ರಕಾಶನ, ಅಗಡಿಯ ಶ್ರೀ ಶೇಷಾಚಲ ಹೈಸ್ಕೂಲು, ಪ್ರಭುಸ್ವಾಮಿ ಧಾರ್ಮಿಕ ಸಂಸ್ಥೆ, ಹುಬ್ಬಳ್ಳಿಯ ಮೂರು ಸಾವಿರ ಮಠದ ಜಗದ್ಗುರು ಗಂಗಾಧರ ಯೋಗೀಂದ್ರ (ಮೂಜಗಂ) ಮಹಾಸ್ವಾಮಿಗಳ ಅಮೃತ ಮಹೋತ್ಸವ, ಮುಂತಾದ ಕಡೆಗಳಲ್ಲಿ ಅವರಿಗೆ ಸನ್ಮಾನ ಮಾಡಿದ್ದಾರೆ. ಅವರಿಗೆ ಬಂದಿರುವ ಸನ್ಮಾನಗಳು ಅಸಂಖ್ಯಾತ. ಇಲ್ಲಿ ಕೆಲವನ್ನು ಮಾತ್ರ ಪ್ರಸ್ತಾಪಿಸಲಾಗಿದೆ.

**ಬ. ಎನ್.ಸಿ. ದೇಸಾಯಿಯವರನ್ನು ಕುರಿತು ಪ್ರಕಟಿತ ಸಾಹಿತ್ಯ**

ಎನ್.ಸಿ. ದೇಸಾಯಿಯವರನ್ನು ಕುರಿತು ಕನ್ನಡ, ಹಿಂದಿ, ಇಂಗ್ಲಿಷ್ ಮತ್ತು ಮರಾಠಿ ಪತ್ರಿಕೆ ವಿಮರ್ಶೆ ಮಾಡಿ ಬರೆದಿರುವುದು ಪ್ರಕಟವಾಗಿವೆ. ಆದರೆ ಈ ಅಧ್ಯಯನದ ಸಮಯದ ಮಿತಿಯಲ್ಲಿ ಕ್ಷೇತ್ರಕಾರ್ಯದಲ್ಲಿ ಸಿಕ್ಕ ಮಾಹಿತಿಯ ಆಧಾರ ಮೇಲೆ ಪ್ರಕಟಿತ ಲೇಖನಗಳ ಪಟ್ಟಿಮಾಡಲಾಗಿದೆ.

**ಪತ್ರಿಕೆ : ಸ್ನೇಹ ಸಂಬಂಧ - ಎಪ್ರಿಲ್ ೧೯೯೯**

ಕೆ.ಟಿ. ವೇಣುಗೋಪಾಲ್ ಅವರು ಬರೆದ ಲೇಖನದಲ್ಲಿ ಕಲಾವಿದನ ಮೊದಲ ಪರಿಚಯಾತ್ಮಕ ಲೇಖನ, ಸ್ನೇಹಜೀವಿ, ಮರಳಿ ಮಣ್ಣಿಗೆ ಬಹುಮುಖ ಪ್ರತಿಭಾವಂತ ಈ ರೀತಿಯಾಗಿ ಎನ್.ಸಿ.ದೇಸಾಯಿಯವರ ಜೀವನದ ಹಲವು ಪ್ರಮುಖ ಘಟ್ಟಗಳನ್ನು ಇಲ್ಲಿ ಬಿಚ್ಚಿಟ್ಟಾದ್ದಾರೆ.

ಚಿತ್ರಕಲೆ, ಛಾಯಾ ಚಿತ್ರಕಲೆ, ಲೇಖನ ಈ ಮೂರು ಮಾಧ್ಯಮಗಳಲ್ಲಿ ಸಾಕಷ್ಟು ಅನುಭವ ಪಡೆದು ಎನ್.ಸಿ.ದೇಸಾಯಿಯವರು ಸಾಕಷ್ಟು ಕೆಲಸ ಮಾಡಿದ್ದಾರೆ. ಕೆ.ಟಿ.ವೇಣುಗೋಪಾಲ್ ಅವರು ತಮಾಷೆಗೆ ಒಂದು ಪ್ರಶ್ನೆಯನ್ನು ಕೇಳಿದರಂತೆ "ನೀವು ಹೀಗ ಜಾಕ್ ಆಫ್ ಆಲ್ ಟ್ರೇಡ್ಸ್ ಆಗುವ ಬದಲು ಯಾವುದೇ ಒಂದು ಕ್ಷೇತ್ರದಲ್ಲಿ ವಿಶೇಷ ಪರಿಶ್ರಮಿಸಿದ್ದಾರೆ" ಎಂದು ಕೇಳಿದ ಮಾತು ಮುಗಿಯುವ ಮುನ್ನ ಎನ್.ಸಿ.ದೇಸಾಯಿಯವರು ಉತ್ತರಿಸಿದ್ದು ಈ ರೀತಿಯಂತೆ "ಬಹುಶಃ ನಾನು ಏನೂ ಆಗದೆ ಹೋಗುತ್ತಿದ್ದೆ" ಎಂದು ಹೇಳಿದರಂತೆ. ಇದೇ ರೀತಿಯಾಗಿ ಎನ್.ಸಿ.ದೇಸಾಯಿಯವರನ್ನು ಕುರಿತು ಅನೇಕ ಪರಿಚಯ ಮತ್ತು ವಿಮರ್ಶಾತ್ಮಕ ಲೇಖನಗಳನ್ನು ಬರೆದಿದ್ದಾರೆ. ಇವರು ಬರೆದ ಲೇಖನಗಳು ಮತ್ತು ಪತ್ರಿಕೆಗಳು ಈ ರೀತಿ ಇವೆ.

೨೪.೩.೧೯೮೫ - ಉದಯವಾಣಿ - ಅರುವತ್ತು ತುಂಬಿದ ಕಲಾವಿದ - ಎನ್.ಸಿ.ದೇಸಾಯಿ

೬.೪.೧೯೯೯ - ಉದಯವಾಣಿ - ಎನ್.ಸಿ.ದೇಸಾಯಿ ೭೫ ರ ಸುಖ-ದುಃಖ

ವಿವೇಕ ಸಂಪದ - ಸಾಲಿಗ್ರಾಮ ಸಂಕ್ರಾಂತಿ - ಸಂಚಿಕೆ ೨೦೦೦ - ಸಂತೋಷಕುಮಾರ ಗುಲ್ವಾಡಿ

ಸಂತೋಷಕುಮಾರ ಗುಲ್ವಾಡಿ ಪ್ರಧಾನ ಸಂಪಾದಕರು. ನೂತನ ಸಾಪ್ತಾಹಿಕ, ಬೆಂಗಳೂರು. ಸಾಮಾನ್ಯರಲ್ಲಿ ಅಸಾಮಾನ್ಯರು ಎನ್.ಸಿ.ದೇಸಾಯಿ. ಕಲೆಯೇ ಇವರ ಜೀವನ ಸಂದೇಶ ಎಂದು ತಲೆ ಬರಹ ಇಟ್ಟುಕೊಂಡು ಲೇಖನ ಬರೆದರು. ಅದರಲ್ಲಿ ಎನ್.ಸಿ.ದೇಸಾಯಿಯವರ ಮತ್ತು ಸಂತೋಷ ಕುಮಾರ ಗುಲ್ವಾಡಿಯವರ ಸ್ನೇಹ ಕುರಿತು ಹೇಳಿದ್ದಾಗಿದೆ. ಸಂತೋಷ ಕುಮಾರ ಗುಲ್ವಾಡಿಯವರು ಎನ್.ಸಿ.ದೇಸಾಯಿ ಒಬ್ಬರು ನನ್ನ ಮಟ್ಟಿಗಂತೂ ಆಪತ್ಬಾಂಧವರಾಗಿ ಬಂದು, ಜೀವನ ಒಂದು ಸಮಸ್ಯೆಯ ಮೂಟೆ ಎಂದು ಕೊಂಡು ಕಕ್ಕಾವಿಕ್ಕಿಯಾದಾಗ ಬೆಳಕಿನ ಕಿರಣ ತೋರಿದವರು ಎಂದು ವಿವರಿಸಿದ್ದಾರೆ.

ಎನ್.ಸಿ.ದೇಸಾಯಿಯವರು ಜೀವನದಲ್ಲಿ ತುಂಬಾ ಕಷ್ಟ ಅನುಭವಿಸಿದವರು. ಆದರೆ ನಂಜುಂಡ ಶಿವನಂತೆ ಇತರರಿಗೆ ಸವಿಯನ್ನೇ ಉಣಿಸಿದವರು, ಇತರರಿಗೆ ಕೊಟ್ಟು ತನ್ನ ಕಷ್ಟಗಳನ್ನು ಮರೆತರು. ಹೀಗೆ ಅವರು ಜೀವನದಲ್ಲಿ ಪಡೆದುದಕ್ಕಿಂತ ಕೊಟ್ಟಿದ್ದೇ ಹೆಚ್ಚು. ಜೀವನದ ಕ್ರೌರ್ಯದ ಮುಂದೆ ಅವರು ತಲೆಬಾಗಿದರೂ ತಮ್ಮ ಕಲೆ, ಛಾಯಾಗ್ರಹಣ, ಬರವಣಿಗೆ ಸ್ನೇಹ, ದೈವಭಕ್ತಿಗಳಿಂದಾಗಿ ಅನಾಥ ಪ್ರಜ್ಞೆ ಅಸಹಾಯಕತೆಯ ಕೊಚ್ಚಿಕೊಂಡು ಹೋಗಲಿಲ್ಲ ಎಂದು ಹೇಳುತ್ತಾರೆ.

'ಸದ್ಬೋಧ ಚಂದ್ರಿಕೆ' ಪತ್ರಿಕೆ ಜುಲೈ ೨೦೦೩

ಕುಸುಮಾವತಿ ಹೆಚ್ ಕುಲಕರ್ಣಿ ಮುಂಬೈ ಇವರು ಬರೆದ ಲೇಖನ ವರಪುತ್ರ ನಾನಾಸಾಹೇಬ ಬಹದ್ದೂರ ದೇಸಾಯಿ ಇವರನ್ನು ಕುರಿತು ಬರೆದ ಲೇಖನದಲ್ಲಿ ಎನ್.ಸಿ.ದೇಸಾಯಿಯವರ ಜನ್ಮದ ಹಿಂದೆ ಇರುವ ರಹಸ್ಯದ ಬಗ್ಗೆ ವಿವರಿಸಿದ್ದಾರೆ. ಇದರಲ್ಲಿ ಅವರ ವ್ಯಕ್ತಿ ಜೀವನ ಮತ್ತು ಕಲಾ ಬದುಕು ಕುರಿತು ಹೇಳಿದ್ದಾರೆ ಜೊತೆಗೆ ಎನ್.ಸಿ.ದೇಸಾಯಿಯವರ ಮುಂಬೈ ಉಪನಗರವಾದ ಡೊಂಬಿವಲಿಯಲ್ಲಿ ಶ್ರೀಚಿದಂಬರ ಸೇವಾ ಮಂಡಳಿಯನ್ನು ಸ್ಥಾಪಿಸಿದ್ದಲ್ಲದೇ ಅಧ್ಯಕ್ಷರಾಗಿ ಸೇವೆ ಸಲ್ಲಿಸಿ ಮಂಡಳಿಯು ಹೆಸರು ಗಳಿಸುವಂತೆ ಮಾಡಿದರು. ಜನ ಪ್ರಿಯ ನಾನಾ ಮರೆಯಲಾರದ ವ್ಯಕ್ತಿ ಎಂದು ಕುಸುಮಾವತಿಯವರು ವ್ಯಕ್ತಪಡಿಸಿದ್ದಾರೆ.

'ಸದ್ಬೋಧ ಚಂದ್ರಿಕೆ' ಪತ್ರಿಕೆ ಜುಲೈ ೨೦೦೩

ಬಾಲಕೃಷ್ಣ ಹೆಗಡೆಯವರು ಬರೆದ ಲೇಖನದಲ್ಲಿ ಎನ್.ಸಿ.ದೇಸಾಯಿಯವರ ಅಂತರಾಳದ ಮಾತುಗಳು ಲೇಖಕರು ಮನಮುಟ್ಟುವಂತೆ ಚಿತ್ರಿಸಿದ್ದಾರೆ. ಚಿತ್ರಕಲೆಯಲ್ಲಿ ಇನ್ನೂ ಬಹಳ ಸಾಧಿಸುವುದಿದೆ ನನಗೂ ವಯಸ್ಸಾಯಿತು. ಬ್ರಷ್ ಹಿಡಿದ್ರೂಡ್ನೇ ಕೈ ನಡಗಲಿಕ್ ಹತ್ತದ. ತುಂಬಾ ತ್ರಾಸ್ ಆಗ್ಲಿಕ್ ಹತ್ತದ. ಏನಾದ್ರೂ

ಹೊಸ ತಂತ್ರಾನ ಯಾರಿಗಾದ್ರೂ ಹೇಳ್ಕೋಡನಾಂತಂದ್ರ ಸರಿಯಾದ ಹುಡುಗ್ರು ಯಾರೂ ಸಿಕ್ತಾ ಇಲ್ಲ ನನಗೆ ಅಂಟಿಕೊಂಡ ಸರ್ವಸುತ್ತು ಕೂಡಾ ಗುಣ ಆಗ್ತಾ ಇಲ್ರಿ, ಏನ್ ಮಾಡ್ತೋದ್ರೀ, ಆ ಭಗವಂತನ ಇಚ್ಛಾ ಏನ್ ಅದನೋ ಯಾರಿಗ್ಗೊತ್ತು. ಎಂದು ನುಡಿದ ಮಾತುಗಳು ದೇಸಾಯಿಯವರ ವಾಸ್ತವ ಬದುಕನ್ನು ಮಾನವೀಯವಾಗಿ ಬಿಂಬಿಸುತ್ತದೆ.

ಜೊತೆಗೆ ಅವರ ಜೀವನದ ವಿವರಗಳನ್ನು ನೀಡುತ್ತ ಈ ರೀತಿಯಾಗಿ ಹೇಳಿದ್ದಾರೆ. ಎನ್.ಸಿ.ದೇಸಾಯಿಯವರು ಅಗಡಿ ಆನಂದವನದ ಸದ್ಗುರು ಶ್ರೀಶೇಷಾಚಲ ಸಾಧುಗಳ ಪರಮ ಭಕ್ತರಾಗಿದ್ದು ಇವರು ಆ ಮಠಕ್ಕೆ ಸುಮಾರು ೫-೬ ಎಕರೆ ಭೂಮಿ ದಾನ ಮಾಡಿ ಧಣಿಗಳೆನಿಸಿಕೊಂಡರು ಮತ್ತು ಇವರ ಲೇಖನ ಹಾಗೂ ಕಲಾಕೃತಿಗಳ ಬಗೆಗೆ ಮೌಲ್ಯಯುತವಾದ ವಿಶ್ಲೇಷಣೆಯನ್ನು ಮಾಡಿದ್ದಾರೆ.

**ವಾಙ್ಮಯ ವಿಶೇಷ ಕನ್ನಡಪ್ರಭ ೨೩.೮.೧೯೮೭**

ಸುಪ್ರಸಿದ್ಧ ಕಲಾವಿದ ಶಂಕರಪಾಟೀಲ್‌ರು ಎನ್.ಸಿ.ದೇಸಾಯಿಯವರನ್ನು ಕುರಿತು ಬರೆದ ಲೇಖನದಲ್ಲಿ ಈ ರೀತಿ ಹೇಳುತ್ತಾರೆ. 'ದೇಸಾಯಿವರು ಸ್ನೇಹ ಜೀವಿ, ತಮ್ಮ ಪರಿಚಿತರೊಂದಿಗೆ ಸ್ನೇಹವಾಗಿರುವುದಷ್ಟೇ ಅಲ್ಲ ಕಲಾವಿದರೊಂದಿಗೂ ನಿಕಟ ಸ್ನೇಹದಿಂದಿರುತ್ತಿದ್ದರು'. "ಕರ್ಮವೀರ" ಮುಖಚಿತ್ರಗಳನ್ನು ಬರೆಸುವ ಪ್ರಾಯೋಗಿಕ ಕಾರ್ಯ ಕೈಗೊಂಡಾಗ ಅವರು ನಮ್ಮನ್ನು ಸುಮಾರು ೨೦-೨೫ ಕಲಾವಿದರ ಬಳಿ ಕರೆದೊಯ್ದಾಗ ನನಗೆ ಒಂದು ರೀತಿ ಸಂತಸ, ಒಂದು ರೀತಿ ಅಚ್ಚರಿ, ಅವರ ಕಲಾವಿದರ ಒಳಗೆ ಎಷ್ಟು ದೊಡ್ಡದಿದೆಯಲ್ಲ ಎಂದು ಅಚ್ಚರಿಪಟ್ಟೆ. ಎಷ್ಟೋ ಕನ್ನಡ ಕನ್ನಡೇತರ ಕಲಾವಿದರ ಬಗ್ಗೆ ವಿವಿಧ ಪತ್ರಿಕೆಗಳಲ್ಲಿ ಬರೆದು ಕಲಾವಿಮರ್ಶೆ ಮಾಡಿ ಬೆಳಕಿಗೆ ತಂದಿದ್ದಾರೆ. ಅವರಿಗೆ ಸಾಕಷ್ಟು ಕಲಾ ಪ್ರದರ್ಶನಗಳನ್ನು ಏರ್ಪಡಿಸಲಾಗಲಿಲ್ಲವೆಂದು ಕೊರಗಿತ್ತು. ಆದರೆ ಅವರು ರಸಿಕರನ್ನು ಆರ್ಟ್‌ಗ್ಯಾಲರಿಗೆ ಎಳೆಯುವ ಬದಲು ಪತ್ರಿಕೆಗಳ ಮುಖಪುಟಗಳ ಮೂಲಕ ಮುಂತಾಗಿ ತನ್ನ ಚಿತ್ರಗಳನ್ನು ಕಲಾರಸಿಕರ ಬಾಗಿಲಿಗೆ ತಂದಿದ್ದಾರೆ. ಆದರೆ, ಪ್ರದರ್ಶನಗಳನ್ನು ಅಲ್ಲಲ್ಲಿ ಏರ್ಪಡಿಸುವ ಇಚ್ಛೆ ಮಾತ್ರ ಅವರಲ್ಲಿ ಬಲವಾಗಿದೆ ಎಂದು ಸುಪ್ರಸಿದ್ಧ ಕಲಾವಿದ ಶಂಕರ ಪಾಟೀಲ ಎನ್.ಸಿ.ದೇಸಾಯಿಯವರನ್ನು ಮುಂಬೈಯಲ್ಲಿ ಇದ್ದಾಗ ಭೇಟಿಯಾಗುತ್ತಿದ್ದರಂತೆ. ಆ ಸಮಯದಲ್ಲಿ ಬರೆದ ಲೇಖನವಿದು.

**ಉದಯವಾಣಿ ೧೧.೫.೧೯೯೭**

ಆರೂರು ಲಕ್ಷ್ಮಣ್ ಶೇಟ್‌ರವರು ಬರೆದ ಲೇಖನ "ನೋವು ನುಂಗಿ ನಗುವ ಕಲಾವಿದ ಎನ್.ಸಿ.ದೇಸಾಯಿ" ಈ ಲೇಖನ ಸುಂದರ ವರ್ಣಚಿತ್ರಗಳೊಂದಿಗೆ ಮೂಡಿಬಂದಿದೆ. ಈ ಲೇಖನ ಇದರ ಜೀವನದ ಕಾಲಘಟ್ಟಗಳನ್ನು ವ್ಯಕ್ತಪಡಿಸುತ್ತದೆ. ಸ್ನೇಹಿತರು, ಬಂಧುಗಳು, ನೆಚ್ಚಿನ ಕಲಾವಿದರು ಹೀಗೆ ಅನೇಕ ನೋವಿನ ಸಂಗತಿಗಳ ಜೊತೆಗೆ ಸಂತೋಷದ ಕೆಲವು ಕ್ಷಣಗಳು ಇತ್ಯಾದಿ ಈ ಲೇಖನ ಒಳಗೊಂಡಿದೆ.

ವಿಜಯ ಕರ್ನಾಟಕ - ಗುರುವಾರ ೧೭ ಏಪ್ರಿಲ್ ೨೦೦೩

ಸರ್ಪ ಸುತ್ತಿನಿಂದ ಸೊರಗುತ್ತಿರುವ ಸೃಜನ ಶೀಲ ಕಲಾವಿದ ೮೦ ಕ್ಕೆ ಅಡಿ ಇರಿಸಿರುವ ಚಿತ್ರಕಲಾವಿದ ಎಸ್.ಸಿ.ದೇಸಾಯಿಯವರನ್ನು ಹುಬ್ಬಳ್ಳಿಯ "ಜೇಂದ್ರೆ ಕುಟೀರು"ದಲ್ಲಿ ಸನ್ಮಾನಿಸಲಾಗುತ್ತಿದೆ. ಲಗಡಿಯ "ಬಹಾದ್ದೂರ್ ದೇಸಾಯಿ ಬಂಧುಬಳಗ" ಹಮ್ಮಿಕೊಂಡ "ಸ್ನೇಹ ಸಮ್ಮಿಲನದ ನಿಮಿತ್ತ ಈ ಲೇಖನವನ್ನು ಆರೂರು ಲಕ್ಷ್ಮಣ್ ಶೇಟ್ ಈ ಸ್ನೇಹ ಸಮ್ಮಿಲನ"ದಲ್ಲಿ ಸುಲೋಚನಾ ಪೋತ್ನಿಸ್, ಡಾ ವಾಮನ ಬೇಂದ್ರೆ ಡಾ.ಕೆ.ಎಸ್.ಶರ್ಮಾ, ಸುರೇಂದ್ರ ದಾನಿ ಶಾ.ಮಂ.ಕೃಷ್ಣರಾಯ ಮುಂತಾದ ಮಹನೀಯರು ಉಪಸ್ಥಿತರಿದ್ದರು.

ಚಿತ್ರಗುಪ್ತ ೧೭ ಫೆಬ್ರುವರಿ ೧೯೫೭

ನಿರಂಜನವರು ಬರೆದ ಲೇಖನ 'ಕನ್ನಡ ಕಲಾವಿದ ನಾನಾ' ಎಂಬ ತಲೆ ಬರಹ ಈ ಲೇಖನದಲ್ಲಿ "ಉದಯೋನ್ಮುಖ ಚಿತ್ರಕಾರರೊಬ್ಬರ ಮೀಸೆ ಕುಡಿಯೊಡೆಯುತ್ತಿದ್ದ ಯುವಕ ಕಲಾವಿದರೊಬ್ಬರ ಪರಿಚಯ" ೧೯೫೭ರಲ್ಲಿ ಬರೆದಂತ ಲೇಖನವಿದು ಇದರಲ್ಲಿ ದೇಸಾಯಿಯವರ ಸೂಕ್ಷ್ಮ ಪರಿಚಯವನ್ನು ಬಿಚ್ಚಿಟ್ಟಿದ್ದಾರೆ.

ಮೂಡಣ ಹಾವೇರಿ ೨೫.೧೨.೧೯೯೯

ಲೇಖಕರು ವೈ. ವೃಷಬೇಂದ್ರಯ್ಯ ಹುಬ್ಬಳ್ಳಿ ಇವರ ಪರಿಚಯ ನೀಡುತ್ತಾ ಈ ರೀತಿ ಹೇಳಿದ್ದಾರೆ. ನಾಡಿನ ವಿಶೇಷ ಸಂಚಿಕೆಗಳಿಗೆ ಇವರ ಸಚಿತ್ರ ಲೇಖನಗಳಿಗೆ ಯಾವಾಗಲೂ ಬೇಡಿಕೆ ಉಂಟು ೧೯೮೪ರಲ್ಲಿ ೬೦ನೇ ವಯಸ್ಸಿನಲ್ಲಿ ಮುಂಬೈಯಲ್ಲಿ ನಿವೃತ್ತರಾದ ಮೇಲೆ ನಿವೃತ್ತ ಜೀವನ ಕಳೆಯಲು ಹುಬ್ಬಳ್ಳಿಗೆ ಬಂದವರು ಈಗ ಅಲ್ಲಿಯೇ ಖಾಯಂ ವಾಸವಾಗಿದ್ದಾರೆ. ಇವರಿಗೆ ಬಂದ ಕಷ್ಟ ನಷ್ಟಗಳಿಗೆ ಲೆಕ್ಕವೇ ಇಲ್ಲ ಅವನ್ನೆಲ್ಲಾ ಹೇಗೆ ನೀಗಿಸುತ್ತಾರೆಂದೆನಿಸುತ್ತದೆ ಎಂತಹ ಸಂದರ್ಭದಲ್ಲಿಯೂ ದಿಟ್ಟತನದಿಂದಲೇ ನಡೆದಿದ್ದಾರೆ. ಇವರಿಗೆ ಹುಬ್ಬಳ್ಳಿ ಧಾರವಾಡ ಅವಳಿ ನಗರಗಳ ನಗರಪಾಲಿಕೆಯು ಧೀಮಂತ ಕಲಾವಿದ ನಾಗರಿಕ ಎಂದು ಸನ್ಮಾಸಿದರು.

ಯಾವುದೇ ಕಲಾವಿದರಿಗೆ ಅವರಿಗೆ ಸಂದ ಪ್ರಶಸ್ತಿಗಳು. ವಿಮರ್ಶಾತ್ಮಕ ಪರಿಚಯಗಳು ಅವರ ಕಲಾಪ್ರತಿಭೆಯನ್ನು ಗುರುತಿಸಲು ಸಹಾಯಕವಾಗುತ್ತವೆ. ಆದರೆ ಕೆಲ ಕಲಾವಿದರಿಗೆ ತಮ್ಮ ಕಲಾಪ್ರತಿಭೆಗೆ ತಕ್ಕ ಪುರಸ್ಕಾರಗಳು ಲಭಿಸಿರುವುದಿಲ್ಲ. ದೇಸಾಯಿಯವರೂ ಈ ಸಾಲಿಗೆ ಸೇರುತ್ತಾರೆ. ಇವರ ಪ್ರತಿಭೆಗೆ ಗೌರವಯುತವಾದ ಪ್ರಶಸ್ತಿ ಪುರಸ್ಕಾರಗಳು ಸಿಗಲಿಲ್ಲವೆಂದೇ ಹೇಳಬಹುದು. ಕಾರಣ ದೇಸಾಯಿಯವರು ಪ್ರಶಸ್ತಿ ಪುರಸ್ಕಾರಕ್ಕಾಗಿ ನೈತಿಕತೆಯನ್ನು ಬಿಟ್ಟು ಯಾವುದೇ ರಾಜಕೀಯದ ವಾತಾವರಣಕ್ಕೆ ಒಗ್ಗಲಿಲ್ಲ. ಇದು ದೇಸಾಯಿಯವರ ನಿಷ್ಕಲ್ಮಶವಾದ ಸುಂದರ ಬದುಕನ್ನು ಪ್ರತಿಬಿಂಬಿಸುತ್ತದೆ. ಪತ್ರಿಕಾ ಬರಹಗಳು ಮೂಲತಃ ಜನಪ್ರಿಯ ಮಾಧ್ಯಮವಾಗಿದ್ದರಿಂದ ದೇಸಾಯಿಯವರ ಕಲಾವಿಮರ್ಶೆಯೂ ಸಹ ಅಕಾಡೆಮಿಕ್ ಶಿಸ್ತಿನ ಗಂಭೀರ ವಿಮರ್ಶೆಯಾಗಿ ರೂಪುಗೊಳ್ಳದೇ ಇರುವುದು ವಿಷಾದನೀಯ.

# ಸಂದ ಪ್ರಶಸ್ತಿ, ಗೌರವ ಸನ್ಮಾನ, ಪ್ರಶಂಸೆಗಳು ಕಲಾ ಪ್ರದರ್ಶನ ಮತ್ತು ಪ್ರಾತ್ಯಕ್ಷಿತೆಗಳು



ಎನ್.ಸಿ.ದೇಸಾಯಿಯವರಿಗೆ 1999–2000 ನೇ ಸಾಲಿನ ಲಲಿತಕಲಾ ಅಕಾಡೆಮಿ ಪ್ರಶಸ್ತಿ. ಕನ್ನಡ ಮತ್ತು ಸಂಸ್ಕೃತಿ ಖಾತೆಯ ಸಚಿವೆ ರಾಣಿ ಸತೀಶ್ ಅವರು ನೀಡುತ್ತಿರುವುದು.



ಎನ್.ಸಿ.ದೇಸಾಯಿಯವರು, ಪ್ರಶಸ್ತಿಗಳ ಪತ್ರಫಲಕಗಳ ಜೊತೆಗೆ



ಎನ್.ಸಿ.ದೇಸಾಯಿಯವರಿಗೆ ಸಂದ ಪ್ರಶಸ್ತಿಗಳು

# ಸಂದ ಪ್ರಶಸ್ತಿ, ಗೌರವ ಸನ್ಮಾನ, ಪ್ರಶಂಸೆಗಳು ಕಲಾ ಪ್ರದರ್ಶನ ಮತ್ತು ಪ್ರಾತ್ಯಕ್ಷತೆಗಳು



ಎನ್.ಸಿ.ದೇಸಾಯಿಯವರು ಪ್ರಶಸ್ತಿಯೊಂದಿಗೆ ಚಿತ್ರದಲ್ಲಿ ಅವರ ಧರ್ಮಪತ್ನಿ ಶ್ರೀಮತಿ ಶಾರದಬಾಯಿಯವರೂ ಜೊತೆಗಿದ್ದಾರೆ



"ಡಿವೈನ್ ಪಾರ್ಕ್ ಮುಂಬಯಿಯವರು ಮತ್ತು ಕರ್ನಾಟಕ ಸಂಘ ಮುಂಬಯಿ" ಆಯೋಜಿಸಿದ ಕಲಾ ಪ್ರದರ್ಶನದಲ್ಲಿ ಎನ್.ಸಿ.ದೇಸಾಯಿಯವರ ಜೊತೆಗೆ ಡಾ.ಚಂದ್ರಶೇಖರ ಉಡುಪ ಅವರು ಮತ್ತು ರೇಖಾ ರಾವ್ ಇರವರು.



ಡಿವೈನ ಪಾರ್ಕನವರಿಗೆ ಎನ್.ಸಿ.ದೇಸಾಯಿಯವರು ರಚಿಸಿ ಕೊಟ್ಟ ವಿವೇಕಾನಂದರ ಕಲಾಕೃತಿಗಳನ್ನು ಮುಂಬೈನಲ್ಲಿ ಪ್ರದರ್ಶಿಸಿದ ಸಂದರ್ಭ

## ಸಂದ ಪ್ರಶಸ್ತಿ, ಗೌರವ ಸನ್ಮಾನ, ಪ್ರಶಂಸೆಗಳು ಕಲಾ ಪ್ರದರ್ಶನ ಮತ್ತು ಪ್ರಾತ್ಯಕ್ಷತೆಗಳು



ಎನ್.ಸಿ.ದೇಸಾಯಿಯವರು
ಕ್ಯಾಲೆಂಡರ್‌ಗಾಗಿ ರಚಿಸಿದ
ಕೃತಿಗಳ ಪ್ರದರ್ಶನ.




ಎನ್.ಸಿ.ದೇಸಾಯಿಯವರು
ಅನಾರೋಗ್ಯದಲ್ಲಿದ್ದಾಗ ಮರಾಠಿ ಕನ್ನಡ
ಸ್ನೇಹವರ್ಧನ ಕೇಂದ್ರ ಪುಣೆಯವರು ನಡೆಸಿದ
ಕಲಾಪ್ರದರ್ಶನದಲ್ಲಿ ಮೊಮ್ಮಗ ಆದಿತ್ಯ
ಉಪಸ್ಥಿತರಿದ್ದಾರೆ.



ಬೆಳಗಾವಿಯಲ್ಲಿ
ಎನ್.ಸಿ.ದೇಸಾಯಿಯವರು ಪ್ರಾತ್ಯಕ್ಷತೆ
ನೀಡುವಾಗ ವಿದ್ಯಾರ್ಥಿಗಳು
ನೋಡುತ್ತಿರುವುದು ಮತ್ತು ಶಿಷ್ಯ
(ಸಹಾಯಕ) ಮಂಜುನಾಥ
ನಾಗಮ್ಮನವರ ಜೊತೆ ಇದ್ದಾರೆ.

# ಎನ್ ಸಿ ದೇಸಾಯಿಯವರಿಗೆ ಸಂದ ಪ್ರಶಸ್ತಿ, ಗೌರವ ಸನ್ಮಾನ, ಪ್ರಶಂಸೆಗಳು ಕಲಾ ಪ್ರದರ್ಶನ ಮತ್ತು ಪ್ರಾತ್ಯಕ್ಷಿತೆಗಳು



ಪ್ರಾತ್ಯಕ್ಷತೆ ನೀಡುತ್ತಿರುವುದು




ಎನ್.ಸಿ.ದೇಸಾಯಿಯವರಿಗೆ ಸನ್ಮಾನ-1




ಎನ್.ಸಿ.ದೇಸಾಯಿಯವರಿಗೆ ಸನ್ಮಾನ-2

## ಕೆಲವು ಛಾಯಾ ಚಿತ್ರಗಳು.



ಗಡಿಗೆಯ ಮೇಲೆ "ಗೌರಿ" ಎಂಬ
ಚಿತ್ರ ಬಿಡಿಸುವಲ್ಲಿ ನಿರತರು.



ಸಂಗೀತದ ಅಭಿರುಚಿಯನ್ನು ಕೃತೋ
ಮುಖಾಂತರ ಅಭಿವ್ಯಕ್ತಿಸುತ್ತಿರುವಾಗ
ಕೆಲವು ವಿದ್ಯಾರ್ಥಿಗಳ ಜೊತೆಗೆ ಅವರ ಶಿಷ್ಯೆ
ಮುತ್ತಮ್ಮ ಯನಮನೋಲ್ಲು ಅವರು
ಉಪಸ್ಥಿತರಿದ್ದಾರೆ.



ಹೂವು ಬೆಳೆಸುವಲ್ಲಿ ನಿರತರು.

## ಅಧ್ಯಾಯ ಆರು

## ಸಮಾರೋಪ

ಆದಿಮಾನವನ ಕಾಲದಿಂದ, ಕಲೆ ಬದುಕಿನ ಸ್ಥಿತಿಗತಿಗಳನ್ನು ಬಿಂಬಿಸಿದೆ. ಇಲ್ಲಿಯವರಿಗೆ ಇತಿಹಾಸ ದಾಖಲೆಗೆ ಕಲೆಯೇ ಪ್ರಧಾನ ಕಾರಣವಾಗಿದೆ. ಜೊತೆಗೆ ಕಲಾವಿದರ ಕಾಯಕದ ಶಕ್ತಿ ಚೈತನ್ಯವಿದೆ. ದೀಮಂತ ಎನ್.ಸಿ.ದೇಸಾಯಿಯವರು ನೋವು ನುಂಗಿ ನಗುತ ಕಲಾಬದುಕು ಸಾಗಿಸಿದ ಬಹುಮುಖ ಪ್ರತಿಭಾವಂತರು. ಇವರ ಕಲಾ ಸಾಧನೆಯಿಂದ ಕಲಾಕ್ಷೇತ್ರಕ್ಕೆ ವೈವಿಧ್ಯಮಯವಾದ, ವಿಶಿಷ್ಟವಾದ ಸಾಮಾಜಿಕ ಮತ್ತು ಆಧ್ಯಾತ್ಮಿಕ ಕಲಾ ಕೃತಿಗಳು ಹಾಗೂ ಸಂಶೋಧನ ಲೇಖನಗಳ ಕೊಡುಗೆಯನ್ನು ಕೊಟ್ಟಿರುವರು. ಹಾಗಾಗಿ ಈ ಶೋಧವು ಮುಂದೆ ಬರುವ ಯಾವ ಪೀಳಿಗೆಗೆ ಉಪಯುಕ್ತವಾಗಿದ್ದು ಕಲಾಲೋಕಕ್ಕೆ ಇದು ಲಾಭದಾಯವಾಗಿದೆ ಎಂದು ಹೇಳಬಹುದು. ಪ್ರಸ್ತುತ ಪ್ರಬಂಧವು ಕಲಾವಿದ ಎನ್.ಸಿ.ದೇಸಾಯಿಯವರ ಜೀವನ ಮತ್ತು ಕಲಾಕೃತಿಗಳ ಅಧ್ಯಯನ ಮಾಡಿದ ಪ್ರಾತಿನಿಧಿಕ ಪ್ರಬಂಧವಾಗಿದೆ. ಒಟ್ಟು ಐದು ಅಧ್ಯಾಯನಗಳಲ್ಲಿ ಇದರ ವಿಷಯ, ವಸ್ತುವಿನ ನಿರೂಪಣೆ ಇದೆ.

ಒಂದು ವೈಭವಯುತ ಶ್ರೀಮಂತ ವಾತಾವರಣವಿರುವ ಮನೆತನದಲ್ಲಿ ಹುಟ್ಟಿ ಬಾಲ್ಯವೆಲ್ಲ ವೈಭವದಿಂದ ಕಳೆದು ದೇಸಾಯಿಯವರಿಗೆ ನಂತರ ವೈಭವಪೂರ್ಣ ಮನೆತನವು ವಿಧಿಯಾಟಕ್ಕೆ ಸಿಕ್ಕಿ ಹೀನಾವಸ್ಥೆಗೆ ಬಂದಾಗ ನೌಕರಿಯೇ ಬದುಕು ಎಂಬಂತಾಯಿತು. ಅಂತಹ ಸಮಯದಲ್ಲಿ ಕಲಾಬದುಕನ್ನು ಆಯ್ಕೆ ಮಾಡಿಕೊಂಡ ಕಲಾ ಹೃದಯವಂತ ಎನ್.ಸಿ.ದೇಸಾಯಿ ಬದುಕಿನ ಉದ್ದಕ್ಕೂ ಅಡ್ಡಿ ಆತಂಕಗಳನ್ನು ಮೆಟ್ಟಿನಿಂತು ಕಲಾ ಸಾಧನೆ ಮಾಡಿದರು. ನೋವು ಉಂಡು ಕಲಾ ಸರಸ್ವತಿಯ ಆರಾಧನೆ ಮಾಡುತ್ತಾ ಕಲಾಕೃತಿಗಳು ಮತ್ತು ಕಲಾ ಸಾಹಿತ್ಯವನ್ನು ರಚನೆ ಮಾಡುತ್ತಲೇ ಹೋದರು.

ಎನ್.ಸಿ.ದೇಸಾಯಿಯವರ ಕಲಾಕೃತಿಗಳು ಅವರ ವೈಚಾರಿಕ ಮತ್ತು ಆಧ್ಯಾತ್ಮಿಕವಾದ ವಿಚಾರಗಳನ್ನು ವ್ಯಕ್ತಪಡಿಸುತ್ತವೆ. ಇವರ ಕಲಾಕೃತಿಗಳು ಹೆಚ್ಚು ಸಂಪ್ರದಾಯಿಕ, ಐತಿಹಾಸಿಕ, ಧಾರ್ಮಿಕತೆಯನ್ನು ಎತ್ತಿ ತೂರುವಲ್ಲಿಯೂ ಹಿಂದೆ ಬಿದ್ದಿಲ್ಲ.

ಎನ್.ಸಿ.ದೇಸಾಯಿಯವರು ಹೆಚ್ಚು ನೈಜ ಕಲಾಕೃತಿಗಳನ್ನು ರಚನೆ ಮಾಡಲು ಇಷ್ಟಪಡುತ್ತಿದ್ದರು. ನೈಜ ಕಲಾಕೃತಿಗಳನ್ನು ರಚನೆ ಮಾಡಬೇಕು ಎಂದರೆ ಅದು ಸಾಮಾನ್ಯವಾದ ಕೆಲಸವೇನಲ್ಲ, ಅದಕ್ಕೆ ಸರಿಯಾದ

ವಿದ್ವತ್ತು ಮತ್ತು ಕೌಶಲ್ಯ ಇರಬೇಕು. ಅದರ ಒಂದೆ ಸಾಕಷ್ಟು ಕೃಷಿ ಮಾಡಬೇಕು. ಆಗಲೇ ಒಳ್ಳೆಯ ನೈಜ ಕೃತಿ ಮಾಡಲು ಸಾಧ್ಯವಾಗುತ್ತದೆ. ಇವರ ರಚನೆಮಾಡಿದ ಕಲಾಕೃತಿಗಳಲ್ಲಿ ಅನೇಕ ಕಲಾಕೃತಿಗಳು ಇವರು ಮಾಡಿದ ಕೃಷಿಯ ಪ್ರತಿನಿಧಿಯಾಗಿವೆ. ಜ್ಞಾನಪೀಠ ಪ್ರಶಸ್ತಿಯ ದ.ರಾ.ಬೇಂದ್ರೆಯವರ 'ಯಾರಿಗೂ ಹೇಳೋಣು ಬ್ಯಾಡ' ಎಂಬ ಪದ್ಯವನ್ನು ಇಟ್ಟುಕೊಂಡು ರಚನೆ ಮಾಡಿದ ಕಲಾಕೃತಿಗಳಿಂದ ದೇಸಾಯಿಯವರ ಸಾಹಿತ್ಯಪ್ರೇಮವನ್ನಲ್ಲದೆ ಕಲೆಸಾಹಿತ್ಯದ ಮಧುರ ಸಂಯೋಜನೆ ಮಾಡುವಲ್ಲಿ ಸಿದ್ಧಹಸ್ತರು ಎಂದು ಹೇಳಬಹುದು.

ಎನ್.ಸಿ.ದೇಸಾಯಿಯವರು ಒಂದು ಶೈಲಿಯನ್ನು ಗುರ್ತಿಸಿಕೊಂಡು ತಮ್ಮದೇ ಆದ ಕಲಾಕೃತಿಗಳನ್ನು ರಚನೆ ಮಾಡಿದ್ದಾರೆ. ಇವರು ರಚನೆ ಮಾಡಿದ ವಿಶ್ವವ್ಯಾಪಿ ಗಣೇಶನ ಚಿತ್ರಗಳಲ್ಲಿ ಅವರ ಶೈಲಿ ಮತ್ತು ತಂತ್ರಗಾರಿಕೆಯು ನೋಡಲು ಸಿಗುತ್ತದೆ. ಇವರಿಗೆ ಜಲವರ್ಣಗಳು ಅತಿ ಪ್ರಿಯವಾದ ವರ್ಣಗಳಾಗಿದ್ದವು ಇವರು ಹೆಚ್ಚು ಕಲಾಕೃತಿಗಳು ಜಲವರ್ಣ ಮತ್ತು ಪೋಸ್ಟರ್ ಮಾಧ್ಯಮದ ಮುಖಾಂತರ ರಚನೆಯಾಗಿವೆ. ತೈಲ ವರ್ಣಗಳನ್ನು ಬಳಸುವಲ್ಲೂ ಇವರ 'ವಿದ್ವತ್ತು' ಕಡಿಮೆಯೇನೂ ಇರಲಿಲ್ಲ.

ಎನ್.ಸಿ.ದೇಸಾಯಿಯವರು ಜೀವನಕ್ಕಾಗಿ ಪ್ರೀಮಿಯರ್ ಅಟೋಮೊಬಾಯಿಲ್ಸ್ ಕಂಪನಿಯ ಪ್ರಚಾರ ಸಾರ್ವಜನಿಕ ಸಂಪರ್ಕ ಇಲಾಖೆಯಲ್ಲಿ ಕೆಲಸಮಾಡುತ್ತ ಜೊತೆಗೆ ಬದುಕಿನುದ್ದಕ್ಕೂ ಸಾವಿರ ಕಲಾಕೃತಿಗಳನ್ನು ರಚನೆ ಮಾಡಿದ್ದಾರೆ. ಇವೆಲ್ಲ ಅವರ ಕಲೆಯ ಗೀಳನ್ನು ಬಿಂಬಿಸುವ ದಾಖಲೆಗಳಾಗಿವೆ ಎಂಬುದನ್ನು ವಿವರಿಸಲಾಗಿದೆ.

ಈ ಕಲಾವಿದನ ಇಬ್ಬರು ಗಂಡು ಮಕ್ಕಳು ಎದೆ ಎತ್ತರ ಬೆಳೆದು ಅಕಾಲ ಸಾವನ್ನಪ್ಪಿದರು. ಇವರ ವೃದ್ಧ ಅವಸ್ಥೆಯಲ್ಲಿ ಕೂಡ ಕಲಾ ಕುಂಚವೆ ಇವರ ಬದುಕಿಗೆ ಕೋಲಾಗಿ ನಿಂತಿತ್ತು. ನೋವಿನ ಜೊತೆಗೆ ಬದುಕಿನ ಭಾರವು ಸಹ ಅಷ್ಟೇ ಇತ್ತು. ಇಂತಹ ಸಮಯದಲ್ಲಿ ಕಮರ್ಷಿಯಲ್ ಕಲೆ ಇವರಿಗೆ ಸಂಗಾತಿಯಾಯಿತು. ಆದರ ಕಲಾ ದೇವತೆಯನ್ನು ಆರಾಧಿಸುವುದು ಕೂಡ ಜೊತೆ ಜೊತೆಗೆ ನಡಿಯುತ್ತಿತ್ತು. ಇವರ ವಿಶ್ವವ್ಯಾಪಿ ಗಣೆಶನ ಕಲಾಕೃತಿಗಳು ಮುಂಬಯಿ, ಗದಗ, ಧಾರವಾಡ, ಬೆಳಗಾವಿ, ಮೈಸೂರು, ಪುಣೆ, ಮತ್ತು ಇತರ ಸ್ಥಳಗಳಲ್ಲಿ ಪ್ರದರ್ಶನಗೊಂಡಿವೆ. ಇವರು ರಚನೆ ಮಾಡಿದ ವಿವೇಕಾದನಂವ ಕಲಾಕೃತಿಗಳ ಪ್ರದರ್ಶನ ಜೊತೆಗೆ ಕ್ಯಾಲೆಂಡರ್ ರೂಪದಲ್ಲಿ ಪ್ರತಿಯೊಂದು ಮನೆ ಸೇರಿವೆ. ಲಲಿತಕಲಾ ಅಕಾಡೆಮಿ ತುಂಬ ತಡವಾಗಿ ಇವರ ಪ್ರತಿಭೆಯನ್ನು ಗುರುತಿಸಿ ಗೌರವ ಪ್ರಶಸ್ತಿ ನೀಡಿದೆ. ಇಂಥ ವೈವಿಧ್ಯಮಯ ವ್ಯಕ್ತಿತ್ವವನ್ನು ಮೆರೆದ ಕಲಾವಿದ ದೇಸಾಯಿಯವರು ಸಮಾಜದ ಅಪರೂಪದ ಆಸ್ತಿ ಎಂಬುದನ್ನು ವಿವೇಚಿಸಲಾಗಿದೆ.

ಎನ್.ಸಿ.ದೇಸಾಯಿಯವರು ಕಾಯಕವೇ ಕೈಲಾಸವೆಂದು ಬದುಕಿನುದ್ದಕ್ಕೂ ಕಲಾಸೇವೆ ಮಾಡಿದ್ದಾರೆ. ಇವರಿಗೆ ಹುಬ್ಬಳ್ಳಿಯವರು ಕಲಾಶ್ರೀ ಪ್ರಶಸ್ತಿ ನೀಡಿದ್ದಾರೆ. ಹುಬ್ಬಳ್ಳಿ ಧಾರವಾಡ ಅವಳಿನಗರಗಳು ಧೀಮಂತ ಕಲಾವಿದ ಎಂಬ ಪ್ರಶಸ್ತಿ ನೀಡಿ ಗೌರವಿಸಿದ್ದಾರೆ. ಇವರನ್ನು ಉದಯ ಟಿ.ವಿ. ಯವರು ಮನೆಗೆ ಬಂದು

ಸಂದರ್ಶನ ಮಾಡಿ ಕಿರುಚಿತ್ರ ತಯಾರಿಸಿ ಅವಲೋಕನ ಕಾರ್ಯಕ್ರಮದಲ್ಲಿ ಪ್ರಸಾರ ಮಾಡಿದ್ದಾರೆ. ಸಂತೋಷ ಕುಮಾರ ಗುಲ್ವಾಡಿಯವರು ಇವರನ್ನು ಕುರಿತು ಈ ರೀತಿಯಾಗಿ ಹೇಳುತ್ತಾರೆ. "ಸಾಮಾನ್ಯರಲ್ಲಿ ಅಸಮಾನ್ಯರು ಎನ್.ಸಿ.ದೇಸಾಯಿ; ಕಲೆಯೇ ಇವರ ಜೀವನ ಸಂದೇಶ" ಎನ್ನುತ್ತಾರೆ. ಇದು ಸತ್ಯವಾದ ಮಾತು ಇದಕ್ಕೆ ಕಾರಣ ಅವರಲ್ಲಿ ಇರುವ ವೈವಿಧ್ಯವಾದ ಪ್ರತಿಭೆ ಸಂಶೋಧಕರಾಗಿ, ಛಾಯಾಚಿತ್ರಕಾರರಾಗಿ, ಪತ್ರಕರ್ತರಾಗಿ, ಕಲಾವಿಮರ್ಶಕರಾಗಿ ಕೆಲಸ ಮಾಡಿದ ದೇಸಾಯಿ ಎಲ್ಲಕ್ಕೂ ಹೆಚ್ಚಾಗಿ ಧೀಮಂತ ಕಲಾವಿದರಾಗಿದ್ದರೆಂಬುದನ್ನು ವಿವೇಚಿಸಲಾಗಿದೆ.

ಎನ್.ಸಿ.ದೇಸಾಯಿಯವರ ಜೀವನದಲ್ಲಿ ಅಷ್ಟೊಂದು ದುಃಖಗಳು ಬಂದರೂ ವಿಚಲಿತರಾಗದೆ ಸಾಧನೆಯ ಹಾದಿಯಲ್ಲಿದ್ದರು. ಇವತ್ತಿನ ಕಲಾವಿದರು ಬೇಗನೆ ವಿಚಲಿತರಾಗಿ ಬೇರೆ ಬೇರೆಯಾದ ಬದುಕಿನ ದಾರಿ ಹುಡುಕಲಾರಂಭಿಸುತ್ತಾರೆ. ಅಂತಹ ಕಲಾವಿದರಿಗೆ ಮತ್ತು ಅವರ ಜೀವನಕ್ಕೆ ದೇಸಾಯಿಯವರ ಜೀವನ ಮತ್ತು ಕಲೆಗಳೆಂದಷ್ಟೂ ಮಾದರಿಯಾಗಿ ಸ್ಫೂರ್ತಿ ನೀಡಬಲ್ಲವುದಾಗಿವೆ ಎಂಬುದನ್ನು ಈ ಪ್ರಬಂಧದಿಂದ ಕಂಡುಕೊಳ್ಳಬಹುದು. ಇವತ್ತಿಗೂ ಕಲೆ ಜೀವಂತವಾಗಿದೆ ಎಂದರೆ ಇಂತಹ ಕಲಾತಪಸ್ವಿಗಳಿಂದಲೇ ಎಂದು ಹೇಳಬಹುದು.

ಈ ಅಧ್ಯಯನವು ಸ್ನಾತಕೋತ್ತರ ಪದವಿಯ ಆಂಶಿಕ ಅವಶ್ಯಕತೆಗಾಗಿ ಸಲ್ಲಿಸಿದ ಸಂಪ್ರಬಂಧ ಇದಾಗಿದ್ದರೂ ಮುಂದೆ ದೇಸಾಯಿಯವರ ಬಗೆಗೆ ಪಿಎಚ್.ಡಿ ಅಧ್ಯಯನ ಮಾಡಲು ಪೂರ್ವಸೂಚನೆಯನ್ನು ನೀಡಬಲ್ಲದು. ಈ ಬಗೆಯ ಸಂಶೋಧನೆಯು ದೇಸಾಯಿಯವರ ಕಲಾತಪಸ್ಸಿಗೆ ಸಂದ ಕಿರುಕಾಣಿಕೆ ಎಂದು ಭಾವಿಸುತ್ತೇನೆ.

# ಗ್ರಂಥಋಣ


೧. ಕರ್ನಾಟಕ ಜನಪದ ಚಿತ್ರಕಲೆ - ಡಾ.ಎಸ್.ಸಿ. ಪಾಟೀಲ

೨. ಕಲಾವಿದ ಎಂ.ಎ. ಚೆಟ್ಟಿಯವರ ಜೀವನ ಕಲಾಕೃತಿಗಳು - ಡಾ. ಲಕ್ಷ್ಮೀದೇವಿ ಗವಾಯಿ

೩. ಸೌಂದರ್ಯಶಾಸ್ತ್ರ - ಡಾ. ಕಾಶೀನಾಥ ಅಂಬಲಗ

೪. ಕಲಾವಿದ ಆರ್.ಎಂ. ಹಡಪದ - ಡಾ. ಸಿದ್ಧಲಿಂಗಯ್ಯ ಹಿರೇಮಠ

೫. ಕಲಾವಿದ ಜೆ.ಎಸ್. ಖಂಡೇರಾವ್ - ಮಲ್ಲಿಕಾರ್ಜುನ ಬಾಗೋಡಿ

೬. ಉತ್ತರ ಕರ್ನಾಟಕದ ಜನಪದ ಶಿಲ್ಪಕಲೆ - ಡಾ. ಶಿವಾನಂದ ಬಂಟನೂರ

೭. ವ್ಹಿ.ಟಿ. ಕಾಳೆ - ಡಾ.ಎಸ್.ಸಿ. ಪಾಟೀಲ

೮. ಕಲಾಕೋಶ - ಎನ್. ಮರಿಶಾಮಾಚಾರಿ

೯. ಚಿತ್ರಾತರಂಗ - ಶಂಕರ ಪಾಟೀಲ

೧೦. ಹಾವನೂರ ಸಂಸ್ಥಾನ - ಎನ್.ಸಿ. ದೇಸಾಯಿ

೧೧. ಸಚಿತ್ರ ಕನ್ನಡ - ಕನ್ನಡ, ಕಸ್ತೂರಿ - ಕೋಶ,
ರಾಮಶ್ರಯ ಬುಕ್ ಡಿಪೋ, ಗದಗ

೧೨. ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ - ಡಾ.ಬಿ.ಕೆ. ಹಿರೇಮಠ

೧೩. ಜನಜಾಗೃತಿ ಚಿಂತಿನ ಸಮಾವೇಶ ನಿರ್ಣಯ ಪಂಚಾಮೃತ - ಸ್ವಾಮಿ ವಿವೇಕಾನಂದ

೧೪. ಡೈರಿಗಳು - ಎನ್.ಸಿ. ದೇಸಾಯಿ

೧೫. ಕಡಲಾಚೆಯ ಗಣೇಶ - ಡಾ.ಪಿ. ಗುರುರಾಜ ಭಟ್


## ದಿನನಿತ್ಯದ ಪತ್ರಿಕೆ


೧. ಯುಗಪ್ರವರ್ತಕ ಬಸವಣ್ಣನವರು, ಪ್ರೊ. ವೈಶಂಪಾಯನ, ಸಂಯುಕ್ತ ಕರ್ನಾಟಕ, ಧಾರವಾಡ

೨. ಎನ್.ಸಿ. ದೇಸಾಯಿ ಕಲೆಯೇ ಇವರ ಜೀವನ ಸಂದೇಶ, ಸಂತೋಷ ಕುಮಾರ ಗುಲ್ವಾಡಿ, ವಿವೇಕ ಸಂಪದ, ಸಾಲಿಗ್ರಾಮ

೩. ಅಡ್ಡಿ ಆತಂಕಗಳನ್ನು ಮೆಟ್ಟಿನಿಂತ ಕಲಾ ಸಾಧನೆ, ಶಂಕರ ಪಾಟೀಲ್, ಕನ್ನಡಪ್ರಭ

೪. ಕಲಾವಿದ ಎನ್.ಸಿ. ದೇಸಾಯಿ ಒಂದು ನೆನಪು, ಬಾಲಕೃಷ್ಣ ಹೆಗಡೆ, ಕನ್ನಡಪ್ರಭ

೫. ಕಲಾವಿದ ಲೇಖಕ ಎನ್.ಸಿ. ದೇಸಾಯಿಯಗೆ ೭೫, ಕೆ.ಟಿ. ವೇಣುಗೋಪಾಲ್, ಸ್ನೇಹಬಂಧ

೬. ಎನ್.ಸಿ. ದೇಸಾಯಿ, ಶಶಾಂಕ, ಸುಧಾ

೭. ಸರ್ಪ ಸುತ್ತಿನಿಂದ ಸೊರಗುತ್ತಿರುವ ಸೃಜನಶೀಲ ಕಲಾವಿದ, ಆರೂರು ಲಕ್ಷ್ಮಣ್ ಶೇಟ್

೮. ಎನ್.ಸಿ. ದೇಸಾಯಿ ೭೫ರ ಸುಖ-ದುಃಖ, ಕೆ.ಟಿ. ವೇಣುಗೋಪಾಲ್

೯. ಎರಡು ಕಾರ್ಯಕ್ರಮಗಳು, ಮುಂಬಯಿ ಪತ್ರ, ಕೆ.ಟಿ. ವೇಣುಗೋಪಾಲ್

೧೦. ಹಾವೇರಿಯಲ್ಲಿ ಕಡಕೋಳ ಪ್ರಶಸ್ತಿ ಪ್ರಧಾನ ಸಮಾರಂಭ, ವೃಷಬೇಂದ್ರಯ್ಯ, ಹುಬ್ಬಳ್ಳಿ, ಮೂಡಣ

೧೧. ನೋವು ನುಂಗಿ ನಗುವ ಕಲಾವಿದ ಎನ್.ಸಿ. ದೇಸಾಯಿ, ಆರೂರು ಲಕ್ಷ್ಮಣಶೇಟ್, ಉದಯವಾಣಿ

೧೨. ಕಾವ್ಯಧಾರೆಗೆ ಕುಂಚದ ಕಾಣಿಕೆ, ಎನ್.ಸಿ. ದೇಸಾಯಿ, ಕಸ್ತೂರಿ

೧೩. ನೋವು ನುಂಗಿ ನಗುವ ಸಂವೇದನಾಶೀಲ ಕಲಾವಿದ ಎನ್.ಸಿ. ದೇಸಾಯಿ, ಆರೂರು ಲಕ್ಷ್ಮಣ್‌ಶೇಟ್

೧೪. ಅರವತ್ತು ತುಂಬಿದ ಕಲಾವಿದ ಎನ್.ಸಿ. ದೇಸಾಯಿ, ಉದಯವಾಣಿ

೧೫. ವರಪುತ್ರ ನಾನಾಸಾಹೇಬ ಬಹದ್ದೂರ ದೇಸಾಯಿ, ಕುಸುಮಾವತಿ ಹೆಚ್. ಕುಲಕರ್ಣಿ, ಮುಂಬೈ, ಸದ್ಬೋಧ ಚಂದ್ರಿಕೆ

೧೬. ನಮ್ಮೂರ ಧಣಿ ಎನ್.ಸಿ. ದೇಸಾಯಿಯವರಿನ್ನಿಲ್ಲ, ಶಂಕರ ಭಟ್ಟ ಜೋಶಿ, ಸದ್ಬೋದ ಚಂದ್ರಿಕೆ

೧೭. ಧೀಮಂತ ನಾಗರಿಕ ಎನ್.ಸಿ. ದೇಸಾಯಿ, ಬಾಳಕೃಷ್ಣ ಹೆಗಡೆ, ಸದ್ಬೋದ ಚಂದ್ರಿಕೆ

೧೮. ಅಗಲಿದ ಕಲಾತಪಸ್ವಿ ಎನ್.ಸಿ. ದೇಸಾಯಿ, ಆರೂರ ಲಕ್ಷ್ಮಣಶೇಟ್, ಸದ್ಬೋದ ಚಂದ್ರಿಕೆ

೧೯. ಹಿರಿಯ ಚಿತ್ರಕಲಾವಿದ ಎನ್.ಸಿ.ದೇಸಾಯಿ ಇನ್ನಿಲ್ಲ, ಪ್ರಜಾವಾಣಿ

